# ಬೆಕ್ಕು - ಬಾವಿ

ಗ. ಬಾಲರಾವ್



BEKKU-BAVI : (The Cat and the well). An one-act in Kannada by S. Balu Rao. Cover by Pramod Ganapatye. Printed at Sagara Mudrana, Sagara, and Published by Akshara Prakashana, Sagar-577401 (Karnataka). First Edition : December 1981. Price Rs .6



ಪ್ರಥಮ ಮುದ್ರಣ : ಡಿಸೆಂಬರ್ ೧೯೮೧



ಬೆಲೆ : ಆರು ರೂಪಾಯಿ.

ತಂದೆ ಶ್ರೀ ಸಿ. ವಿ. ಶಾಮರಾವ್

ಮತ್ತು

ತಾಯಿ ಶ್ರೀಮತಿ ಸೀತಮ್ಮ

ಅವರ ನೆನಪಿಗೆ

## ಈ ನಾಟಕದ ಬಗ್ಗೆ......

ಇದರಲ್ಲಿನ ಮುಖ್ಯಪಾತ್ರ ಅಳಸಿಂಗರು ಒಂದು ಕಡೆ ಹೇಳುತ್ತಾನೆ—

> ಬದುಕೋದಕ್ಕೆ ಅಂತಲೇ ಹುಟ್ಟಿರೋ ಬೆಕ್ಕು ಅಷ್ಟು ಸುಲಭವಾಗಿ ಸಾಯೋದುಂಟೆ ? ಇನ್ನೇನು ಬಾವಿಗೆ ಮಗುಚಿಕೊಂಡಿತು, ಮುಗೀತು ಅದರ ಅವಸ್ಥೆ ಅನ್ನೋವಾಗ ಅದರ ಮೈಯಲ್ಲಿ ಮಿಂಚು ಮೂಡಿಬರುತ್ತೆ. ಹೇಗೋ ತನಗೇ ತಿಳೀದೇ ಚಂಗನೆ ಹಾರಿ ತಪ್ಪಿಸಿಕೊಳ್ಳುತ್ತೆ. ಅದು ಹೆಜ್ಜೆಹೆಜ್ಜೇಗೆ ಸಾವನ್ನ ಸತಾಯಿಸುತ್ತೆ, ಸಾವಿರ ಸಲ ಸತಾಯಿಸುತ್ತೆ. ಅದು ಅರ್ಥವಾಗೋದು ನನ್ನಂತಹವನಿಗೆ—ಬದುಕಿನ ಬಾವಿಯ ಮೇಲೆ ಕೂತು, ಬೆಕ್ಕಿನ ಹಾಗೆ ಬಿದ್ದೂ ಬೀಳದಂತೆ ನಾಜೂಕಾಗಿ ಬಾಳು ನಡೆಸಬೇಕಾಗಿ ಬಂದಿರೋನಿಗೆ.

ನನ್ನ ಬಾಲ್ಯದಲ್ಲಿ ಈ ಅಳಸಿಂಗರುವಿನಂತಹ ಒಂದು ವ್ಯಕ್ತಿ ('ಅಳಶಿಂಗರ್' ಅಂದರೆ ತಮಿಳಿನಲ್ಲಿ 'ಚೆಲುವಾದ ಸಿಂಹ' ಎಂದರ್ಥ ! ಪಾತ್ರದ ಈ ಅನ್ವರ್ಥನಾಮ ಆಕಸ್ಮಿಕವಲ್ಲ).–ಈ ನಾಟಕದಲ್ಲಿನ ಘಟನೆಗೆ ಅನುರೂಪವಾದಂತಹ ಒಂದು ಕಮಾಲನ್ನು ಕಣ್ಣ ಮುಂದೆ ಮಾಡಿತೋರಿಸಿ ಹೋದುದನ್ನು ಕಂಡಿದ್ದೆ. ಆ ಸಂಗತಿ, ಅದು ಎತ್ತಿಟ್ಟ ಜೀವನದೃಷ್ಟಿ ಕಳೆದ ನಲವತ್ತು ವರ್ಷ ಕಾಲದಿಂದ ನನ್ನನ್ನು ಕಾಡುತ್ತ ಬಂದಿದೆ. ಎಂತಲೇ ಅದನ್ನು ನಾಟಕವಾಗಿ ಮಂತ್ರಿಸಿ, ನಾನು ಮತ್ತು ನಮ್ಮ ತಂದೆ ಇಬ್ಬರನ್ನೂ ಒಂದೊಂದು ಪಾತ್ರವನ್ನಾಗಿಸಿಕೊಂಡಂತೆ ಆಡಿಸಿ ತೋರಿಸಬೇಕೆಂಬ ನನ್ನ ಬಹು ದಿನಗಳ ಚಪಲ ಈಗ ನೆರವೇರುತ್ತಿದೆ.

ಈ ನಾಟಕದ ರಂಗಶೈಲಿ—ಅಂದರೆ ಚೌಕಟ್ಟಿನ ವಾಸ್ತವಿಕ ರಂಗಭೂಮಿ, ಅದರಲ್ಲಿನ ಮೈಸೂರು ಕಡೆಯ ಮಧ್ಯಮವರ್ಗದ ಬ್ರಾಹ್ಮಣ ಸಮಾಜದ ಪರಿಚಿತ ಪಾತ್ರಗಳು, ಅವುಗಳ ಬಳಕೆಯ ನಡೆನುಡಿ, ಇತ್ಯಾದಿ—ಈಗ ಕಾಲು ಶತಮಾನಕ್ಕೂ ಹೆಚ್ಚು ಹಳತಾಗಿದೆಯೆಂದು ಬಲ್ಲೆ. ಆದರೆ ನಾಟಕಕ್ಕೆ ಜೀವಾಳವಾಗಿ ನಿಂತ ಆ ಬದುಕು, ಬಾಳಿನಲ್ಲಿ ವಿಶ್ವಾಸ, ಉತ್ಸಾಹಗಳನ್ನು ಹುಟ್ಟಿಸುವ ಅಲ್ಲಿನ ಗಟ್ಟಿಮುಟ್ಟಾದ ಜೀವನದೃಷ್ಟಿ ಎಂದೂ ತೆಗೆದುಹಾಕು ವಂತಹವಲ್ಲ. ಆ ದ್ರವ್ಯ ಬೇರೆ ಯಾವ ರಂಗಶೈಲಿಯಲ್ಲಿಯೂ ಸೊಗಸ ಲಾರದೆಂದು ಮನದಟ್ಟಾದ್ದರಿಂದಲೇ ಅದಕ್ಕೆ ಈ ರೂಪ ಕೊಟ್ಟಿದ್ದೇನೆ. ಜತೆಗೇ, ಇದುವರೆಗೆ ಹೆಚ್ಚಾಗಿ ಹಾಸ್ಯ, ವಿನೋದ, ವಿಡಂಬನೆ, ಕಣ್ಣೀರು ಗಳಿಗಷ್ಟೇ ಬಳಸಿ ಸವೆಸಲಾದ ಒಂದು ರೂಪ, ಶೈಲಿಗಳನ್ನು ಅವಕ್ಕಿಂತ ಹೆಚ್ಚಿನ ಪ್ರಯೋಜನ, ಸಾಧ್ಯತೆಗಳಿಗೆ ದುಡಿಸಿನೋಡುವ ಪ್ರಯತ್ನವೂ ಇಲ್ಲಿದೆಯೆಂಬುದನ್ನು ಓದುಗರು ಗಮನಿಸುವರೆಂದುಕೊಂಡಿದ್ದೇನೆ.

ಯಾವುದೇ ನಾಟಕ ಅಚ್ಚಾಗುವ ಮೊದಲು ಒಮ್ಮೆ ರಂಗದ ಮೇಲೆ ಬರ ಬೇಕು. ಆಗ ಅದರ ಆರೆಕೊರೆಗಳು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತವೆ. ಆದರೆ ದಿಲ್ಲಿಯ ಸೀಮಿತ ಪರಿಸ್ಥಿತಿಯಲ್ಲಿ ಈ ನಾಟಕಕ್ಕೆ ಆ ಲಭ್ಯ ದೊರೆಯ ದಿದ್ದುದು ಸ್ವಾಭಾವಿಕವೆ. ಬದಲು, ರಂಗಭೂಮಿಯಲ್ಲಿ ನುರಿತ ನನ್ನ ಗೆಳೆಯರು ಎಂ. ಎಸ್. ಸತ್ಯು, ಕೆ. ವಿ. ಸುಬ್ಬಣ್ಣ, ಯು. ಪ್ರಭಾಕರರಾವ್ ಹಾಗೂ ಇಲ್ಲಿನ ನೇಷನಲ್ ಸ್ಕೂಲ್ ಆಫ್ ಡ್ರಾಮಾದಲ್ಲಿ ಕಲಿಯುತ್ತಿರುವ ಜಂಬೆ, ನಾಯಿರಿ, ಅಕ್ಷರ, ಜಯರಾಮ್, ಕೃಷ್ಣಮೂರ್ತಿ ಮುಂತಾಗಿ ಹಲವರು ಇದನ್ನು ಓದಿಸಿ ಕೇಳಿ, ಒಪ್ಪಿಕೊಂಡಿದ್ದಾರೆ. ಅವರ ಪರಿಣತ ಪ್ರತಿಕ್ರಿಯೆಯಿಂದ ನಾಟಕಕ್ಕೆ ಲಾಭವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಅವರೆಲ್ಲರಿಗೂ ಹಾಗೂ ಇದರ ಪ್ರಕಟನೆಗೆ ಉತ್ಸಾಹದಿಂದ ಮುಂದಾದ ಅಕ್ಷರ ಪ್ರಕಾಶನದ ಶ್ರೀ ಕೆ. ವಿ. ಸುಬ್ಬಣ್ಣ ಅವರಿಗೂ ನನ್ನ ವಂದನೆಗಳು.

ಹೊಸದಿಲ್ಲಿ<br>ಜುಲೈ ೧೯೭೦

ಶಾ. ಬಾಲುರಾವ್

## ಪಾತ್ರಗಳು

ಶಾಮರಾವ್

ವೆಂಕಮ್ಮ

ಬಾಲು

ಸತ್ಯ

ಆಳಸಿಂಗರಾಚಾರ್

ಸಂಪತ್ತು

ಗುಂಡ

## ನಾಟಕ ನಡೆಯುವ ಸ್ಥಳ

ಕೋರ್ಟು, ತಾಲ್ಲೂಕು ಕಚೇರಿ, ದೇವಸ್ಥಾನಗಳಿರುವ, ಹಳೆಯ ಮೈಸೂರಿನ ಒಂದು ಊರು. ಇನ್ನೂ ಸ್ಪಷ್ಟವಾಗಿ ನಿರ್ದೇಶಿಸ ಬೇಕೆಂದರೆ ಮೈಸೂರಿಗೆ ಒಂಬತ್ತು ಮೈಲಿ ಉತ್ತರಕ್ಕಿರುವ ಶ್ರೀರಂಗ ಪಟ್ಟಣ.

## ಪಾತ್ರಗಳು

**ಶಾಮರಾವ್**—

ಊರಿನ ದೊಡ್ಡ ಲಾಯರು, ಮೇಲೆ ಜಮೀನುದಾರ. ವಯಸ್ಸು ಸುಮಾರು 50. ತೆಳ್ಳಗೆ ಎತ್ತರಕ್ಕಿದ್ದಾನೆ. ಬಿಳಿಯ ಮಲ್ ಕಚ್ಚೆ ಪಂಚೆ, ಮಲ್‌ಜುಬ್ಬ, ಕೈ ಬೆರಳುಗಳಲ್ಲಿ ಒಂದೆರಡು ಉಂಗುರಗಳು. ಕಣ್ಣಿಗೆ ಚಿನ್ನದ ಕಟ್ಟಿನ ಕನ್ನಡಕ. ನಡೆನುಡಿಗಳಲ್ಲಿ ಶ್ರೀಮಂತಿಕೆಯ ಗತ್ತು ಎದ್ದುಕಾಣುತ್ತಿದೆ.

**ವೆಂಕಮ್ಮ**—

ಆತನ ವಿಧವೆ ತಾಯಿ, ಸಕೇಶಿ. ತಲೆ ತುಂಬ ನರೆತ ಬಿಳಿ ಕೂದಲು. ವಯಸ್ಸು ಸುಮಾರು 70. ಉಟ್ಟಿರುವುದು ಬಾದಾಮಿ ಬಣ್ಣದ ರೇಶಿಮೆ ಮಡಿ ಸೀರೆ. ತೋಳಿಲ್ಲದ ಬಿಳಿಯ ರವಿಕೆ. ಕತ್ತಿನಲ್ಲಿ ಚಿನ್ನದ ತಂತಿಗೆ ಕಟ್ಟಿದ ರುದ್ರಾಕ್ಷಿ ಸರ. ಕಣ್ಣಿಗೆ ಕನ್ನಡಕ.

**ಬಾಲು**—

ಶಾಮರಾಯರ ಮಗ. ವಯಸ್ಸು 15. ಕೊಂಚ ಕುಳ್ಳಾದ ನಿಲುವು. ಷರಟು, ಪೈಜಾಮ, ಬಾಚಿದ ತಲೆ.

**ಸತ್ಯ**—

ಅವನ ಸ್ನೇಹಿತ. ಸುಮಾರು ಅದೇ ವಯಸ್ಸು. ಆದರೆ ಕೊಂಚ ಕೆಳಗಿನ ಅಂತಸ್ತು. ಅರೆದೋಳಿನ ಷರಟು. ಕಾಕಿಚಡ್ಡಿ. ಕೆದರಿದ ತಲೆ.

ಹೆಚ್ಚಾಗಿ ರಾಯರ ಮನೆಯಲ್ಲಿಯೇ ಸಣ್ಣ ಪುಟ್ಟ ಕೆಲಸ ಮಾಡಿಕೊಂಡು ಕಾಲ ಹಾಕುವವನು.

**ಅಳಸಿಂಗರಾಚಾರ್—**

ಶಾಮರಾಯನ ಜತೆಯ ಲಾಯರು. ಆದರೆ ಹೆಸರಿಗಷ್ಟೇ. ಏಕೆಂದರೆ ಕಟ್ಟಿಲ್ಲದ ಕಾರಣ ಕೋರ್ಟಿಗೆ ಹೋಗುವ ಅವಕಾಶ ಅಪರೂಪ. ವಯಸ್ಸು ಸುಮಾರು ಶ್ಯಾಮರಾಯನದಷ್ಟೆ. ಕುಳ್ಳು ದೇಹದ ಕಟ್ಟು ಮಸ್ತಾದ ಆಳು. ಮುಖದಲ್ಲಿ ಬಡತನವನ್ನು ನಾಚಿಸುವ ಲವಲವಿಕೆ. ಹಣೆಯ ಮೇಲೆ ಎರಡು ಬಿಳಿ, ಒಂದು ಕೆಂಪಿನ ವೀರವೈಷ್ಣವ ನಾಮ. ಹಾಗೆಯೇ ಕಂಡೂ ಕಾಣದಂತೆ ತೋಳುಗಳ ಮೇಲೆ, ಎದೆಯ ಮೇಲೆ ಸಹ. ಮೇಲುಕೋಟೆಯ ಕೆಂಪಂಚಿನ ಮಾಸಲು ದಟ್ಟಿ ಪಂಚೆ ಉಟ್ಟಿದ್ದಾನೆ. ಮೇಲಕ್ಕೆ ಅದೇ ರೀತಿಯ ಒಶಟಾದ ಬಿಳಿ ಖಾದಿಯ, ಷರಟು–ಬನಿಯನ್‌ಗಳ ಸಮ್ಮಿಶ್ರಣವೆನ್ನಬಹುದಾದ ದೊಗಲೆ ಅಂಗಿ. ಹಿಂದಕ್ಕೆ ನೀಳವಾಗಿ ಕೂದಲು ಬಿಟ್ಟಿದ್ದಾನೆ. ತಲೆಯ ಮುಂಭಾಗದಲ್ಲಿ ಕೂದಲುದುರಿ 'ಬಾದಾಮಿ ಕಟ್'ನ ಭಾಸಕೊಡುವಂತೆ ಬಟ್ಟಗಾಗಿದೆ. ಮುಖದ ಮೇಲೆ ವಾರಕ್ಕೊಮ್ಮೆ ಮಾತ್ರ ಬೋಳಿಸುವ ಕರಿ–ಬಿಳಿಯ ತುರಿ ಗಡ್ಡ. ಬಾಯಿ ತೆರೆದರೆ ಗಂಟೆಯಂತಹ ಧ್ವನಿ.

**ಸಂಪತ್ತು—**

ಅಳಸಿಂಗರಾಚಾರ್ಯರ ಮೊಮ್ಮಗ. ವಯಸ್ಸು 10. ಜುಟ್ಟು ಬಿಟ್ಟಿದ್ದಾನೆ. ಹಣೆಯಲ್ಲಿ ನಾಮ. ಸೊಂಟದ ಕೆಳಗೆ ಮೊಣಕಾಲಿನವರೆಗೆ ತುಂಡು ಪಂಚೆ, ಅದೂ ಮೇಲು ಕೋಟೆಯದೆ, ಕೆಂಪಂಚಿನದೆ. ಸೊಂಟದ ಮೇಲುಗಡೆ ಬರಿಯ ಜನಿವಾರ.

**ಗುಂಡ—**

ಊರ ಬಡ ಬ್ರಾಹ್ಮಣನೊಬ್ಬನ ಮಗ. ವಯಸ್ಸು 12. ಕೊಳಕು ಪಂಚೆ. ಹೆಗಲ ಮೇಲೆ ಚೌಕ. ಎದೆಯ ಮೇಲೆ ಜನಿವಾರ.

# ಬೆಕ್ಕು-ಬಾವಿ

[ರಂಗಸಜ್ಜಿಕೆಯ ಅಂಶಗಳು ಮುಖ್ಯವಾಗಿ ನಾಲ್ಕು—೧ ಲಾಯರ್ ಶಾಮರಾಯರ ಮಂಗಳೂರು ಹೆಂಚಿನ ಮನೆಯ ಇಳಿಬಿದ್ದ ಸೂರು, ಸೂರಿನ ಕೆಳಗೆ ಬಾಗಿಲು, ಜಗಲಿ; ಬಾಗಿಲ ಪಕ್ಕದ ಗೋಡೆಯ ಮೇಲೆ 'ಪಿ. ವಿ. ಶಾಮರಾವ್, ಬಿ. ಎ., ಎಲ್ ಎಲ್. ಬಿ., ಅಡ್ವೋಕೇಟ್' ಎಂಬ ಬೋರ್ಡು; ೨ ಜಗಲಿಯಿಂದ ಎರಡು ಮೆಟ್ಟಲಿಳಿದು ಕೆಳಗೆ ಬಂದರೆ ವಿಶಾಲವಾದ ಮುಂದಿನ ತೋಟದಲ್ಲಿ ಒಂದು ಕಡೆಗೆ ಮರದ ಕೆಳಗೆ ಒಂದು ದುಂಡು ಮೇಜು, ಎರಡೊ ಮೂರೊ ಕುರ್ಚಿಗಳು; ೩ ಇನ್ನೊಂದು ಕಡೆಗೆ, ರಂಗದ ಮಧ್ಯಕ್ಕೆ ಹತ್ತಿಕೊಂಡಂತೆ ಬಾವಿ; ೪ ದೂರದಲ್ಲಿ ಮನೆಯ ಮುಂದಿನ ಗೇಟು. ಗೇಟಿನ ಹೊರಭಾಗ ಪ್ರೇಕ್ಷಕರಿಗೆ ಕಾಣುವಂತಿದ್ದರೆ ಬೋರ್ಡನ್ನು ಬಾಗಿಲ ಬದಲು ಗೇಟಿಗೇ ನೇತುಹಾಕಬಹುದು.

ಸಂಜೆ ನಾಲ್ಕೈದು ಗಂಟೆಯ ಸಮಯ. ಜಗಲಿಯ ಮೇಲೆ ವೆಂಕಮ್ಮ ಮೊರದಲ್ಲಿ ಅಕ್ಕಿ ಆರಿಸುತ್ತ ಕೂತಿದ್ದಾಳೆ. ಶಾಮರಾವ್ ಮುಖದ ಮೇಲೆ

ಮನಸ್ಸಿನೊಳಗಿನ ತಳಮಳ ತೋರಿಸುತ್ತ ಕುರ್ಚಿಯ ಮೇಲೆ ಕೂತಿದ್ದಾನೆ. ಕೈಯಲ್ಲಿ ಶಾಸ್ತ್ರಕ್ಕೆ ದಿನಪತ್ರಿಕೆ ಹಿಡಿದು ತಿರುವುತ್ತಿದ್ದಾನೆ. ಇಬ್ಬರೂ ಚಿಂತಾಗ್ರಸ್ತರಾಗಿದ್ದಾರೆ. ಬಾಲು, ಸತ್ಯ ಇಬ್ಬರೂ ಬಾವಿಯ ಆಕಡೆ ಈಕಡೆ ನಿಂತಿದ್ದಾರೆ. ಸತ್ಯ ಹಗ್ಗವನ್ನು ರಾಟೆಯಿಂದ ಬಾವಿಗೆ ಇಳಿಬಿಟ್ಟು ಎಚ್ಚರಿಕೆ ಯಿಂದ ಹಿಡಿದು ಆಡಿಸುತ್ತಿದ್ದಾನೆ. ಬಾಲು, ಕೈಯಲ್ಲಿ ಒಂದು ಹಳೆಯ ಟಾರ್ಚ್ ಹಿಡಿದು ಬಾವಿಯೊಳಕ್ಕೆ ಬೆಳಕು ಬಿಡಲು ಪ್ರಯತ್ನಿಸುತ್ತಿದ್ದಾನೆ.]

ವೆಂಕಮ್ಮ : ಇದೇನು ಗ್ರಹಚಾರವೋ, ಮಗು ? ಹೀಗಾಯಿತಲ್ಲೋ ? ಬಾವೀಲಿ ಬಿದ್ದಿರೋ ಬೆಕ್ಕನ್ನ ಇನ್ನು ತೆಗೆಯೋದು ಯಾವ ಕಾಲಕ್ಕೆ ? ಆಮೇಲೆ ಆ ನೀರು ಶುದ್ಧವಾಗಿ ಉಪಯೋಗಿಸೋ ಹಾಗಾಗೋದು ಯಾವ ಕಾಲಕ್ಕೆ ? ಅಲ್ಲಿಯತನಕ ಸ್ನಾನಕ್ಕೂ ಕುಡಿಯೋದಕ್ಕೂ ಏನು ಮಾಡೋದು ?

ಶಾಮರಾವ್ : 'ಈಗ ಬಂದೆ, ಸಾಮಾನು ತಂದು ಬೆಕ್ಕು ತೆಗೆದು ಹಾಕ್ತೀನಿ' ಅಂತ ಹೋದ ಆ ಬೆಸ್ತರ ಗಂಗ, ಬೆಳಗ್ಗೆ ಹೋದವನು ಇದುವರೆಗೂ ಬರಲಿಲ್ಲ.

ವೆಂಕಮ್ಮ : ಮೈ ಕೈ ನೋವೊ, ಮಂಡಿ ವಾತವೊ, ನಾನು ಹೇಗೋ ಹೊಳೀಗೆ ಹೋಗಿ ಸ್ನಾನಮಾಡಿಕೊಂಡು ಬರಬಹುದು. ಬರತಾ ಹಾಗೇ ಒಂದು ದೊಡ್ಡಚೆಂಬಲ್ಲಿ ನೀರನ್ನೂ ತರಬಹುದು. ನನ್ನ ಪಾಡು ಹೇಗೋ ಆಗುತ್ತೆ. ನೀವುಗಳು ಏನು ಮಾಡ್ತೀರಿ, ಅಂತ ?

ಶಾಮರಾವ್ : ಮತ್ತೇನು ? ಆ ಭಿಕ್ಷಾನ್ನದ ಗುಂಡನೇ ಗತಿ. ಅವನನ್ನೇ ಹಿಡಿದು ಹೊಳೆಯಿಂದ ಎಷ್ಟಾಗುತ್ತೊ ಅಷ್ಟು ನೀರು ತರಿಸೋದು.

ವೆಂಕಮ್ಮ : ಅವನನ್ನ ನೆಚ್ಚಿಕೊಂಡರೆ ದೇವರೇ ಗತಿ ! ದಿನಕ್ಕೆ ಎಂಟಾಣೆ ಹಾಗೆ ಗೊತ್ತುಮಾಡಿಬಿಡಿ, ಎಷ್ಟು ಬೇಕಾದರೂ ನೀರು ತರಿಸಿಕೊಳ್ಳಿ ಅಂದ. ಬೆಳಗ್ಗೆ ಎರಡು ಸಲ ಎರಡೆರಡು

ಕೊಡ ತಂದುಕೊಟ್ಟ. ಆ ಮೇಲೆ 'ಈಗ ಬಂದೆ. ಹಿತ್ತಲಿಗೆ ಅವಸರ' ಅಂತ ಹೋದವನು ಇಷ್ಟು ಹೊತ್ತಾದರೂ ಬರಲಿಲ್ಲ ನೋಡು.

ಶಾಮರಾವ್ : ಚಾಂಡಾಲ ಜನ ! ಹೊಟ್ಟೆಗಿಲ್ಲದೆ ಸದಾ ಇವತ್ತು ಯಾರ ಮನೇಲಿ ಮದುವೆ, ಯಾರ ಮನೇಲಿ ತಿಥಿ ಅಂತ ಬಿಟ್ಟಿ ಊಟಕ್ಕೆ ಕಾಯ್ತಿರ್ತಾರೆ. ಮರ್ಯಾದೆಯಾಗಿ ಸಂಪಾದಿಸೋ ಅವಕಾಶ ಸಿಕ್ಕಿದಾಗ ಸುಲಿಗೆಗೆ ಇಳೀತಾರೆ.
(ರಂಗದ ಇನ್ನೊಂದು ಕಡೆ, ಬಾವಿಯ ಹತ್ತಿರ...)

ಬಾಲು : ಇನ್ನೊಂದು ಸ್ವಲ್ಪ ಈ ಕಡೆ ತೆಗೊಳ್ಳೊ. ಉ ಹ್ಞೂ, ಈ ಕಡೆ...ನಿನ್ನ ಎಡಕ್ಕೆ.

ಸತ್ಯ : ಒಳಗೆ ಕಗ್ಗತ್ತಲು. ಏನೂ ಕಾಣೋದೇ ಇಲ್ಲ. ಸ್ವಲ್ಪ ಟಾರ್ಚ್ ಸರಿಯಾಗಿ ಬಿಡು.

ಬಾಲು : (ಟಾರ್ಚನ್ನು ಹಿಂದಿನಿಂದ ಕುಟ್ಟುತ್ತ) ಸೆಲ್ ಮುಗೀತಾ ಬಂದಿದೆ ಅಂತ ಕಾಣತ್ತೆ.. ತಾಳು, ತಾಳು...ಅಲ್ಲೇ, ಅಲ್ಲೇ...ಈಗ ಅದು ಹಗ್ಗದ ಹತ್ತಿರವೇ ಇದೆ.

ಸತ್ಯ : ಕಾಣತಿದೆಯೆ ?

ಬಾಲು : ಓಹೋ, ಕಪ್ಪಗೆ ತೇಲತಿದೆ...ಹಗ್ಗದ ಹತ್ತಿರವೇ ಇದೆ... ಈಗ ಹಗ್ಗಾನ ಸ್ವಲ್ಪ ಸಡಿಲಬಿಟ್ಟು, ಕುಲುಕಿಸಿ ಎತ್ತು. (ಸತ್ಯ ಹಾಗೆಯೇ ಮಾಡುವನು) ಇನ್ನೇನು ಬುಟ್ಟಿಗೆ ಸಿಕ್ಕಿ ಹಾಕಿಕೊಳ್ಳುತ್ತೆ.

ಸತ್ಯ : (ಉತ್ಸಾಹದಿಂದ) ಸಿಕ್ಕಿಹಾಕಿಕೊಂಡಿತು ಅಂತ ಕಾಣುತ್ತೆ. ಹಗ್ಗ ಭಾರವಾದ ಹಾಗಿದೆ.

ಬಾಲು : ಹುಷಾರಾಗಿ ಎತ್ತು. ಅರ್ಧದಲ್ಲಿ ಜಾರಿ ಕೆಳಗೆ ಬಿದ್ದರೆ ಇಷ್ಟು ಹೊತ್ತು ಮಾಡಿದ್ದೆಲ್ಲ ವ್ಯರ್ಥವಾಗುತ್ತೆ.
(ಸತ್ಯ ಹಗ್ಗವನ್ನು ನಿಧಾನವಾಗಿ ಮೇಲೆಳೆಯುವನು.)

ಬಾಲು : (ಉತ್ತೇಜಿತನಾಗಿ) ಅಜ್ಜೀ...ಅಣ್ಣಾ...ಬೆಕ್ಕು ಬುಟ್ಟೀಗೆ ಸಿಕ್ಕಿಹಾಕಿಕೊಂಡಿದೆ.

[ಶಾಮರಾವ್ ವೆಂಕಮ್ಮ ಇಬ್ಬರೂ ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಬಾವಿಯ ಬಳಿ ಧಾವಿಸಿ, ಆತಂಕದಿಂದ ಕಾಯುವರು. ಬುಟ್ಟಿಯಿಂದ ನೀರು ಸರಸರನೆ ಸೋರಿ ಹೋಗುವ ಶಬ್ದ. ಹಗ್ಗ ಮೇಲೆ ಬಂದಾಗ ಕಾಣುವುದು ಬರಿಯ ಬುಟ್ಟಿ, ಅದರಲ್ಲಿ ಒಂದಿಷ್ಟು ಕಸ ಮಾತ್ರ.]

ವೆಂಕಮ್ಮ : (ನಿರಾಶಳಾಗಿ) ಎಲ್ರೋ ?! ಸಿಕ್ಕಿಹಾಕಿಕೊಂಡಿತು, ಅಂದ್ರಿ ?!

ಸತ್ಯ : ಎತ್ತೋಕೆ ಹೋದಾಗ ಭಾರವಾಗಿ ಕಂಡಿತು, ಎಂಕಮ್ಮ ನೋರೆ.

ಶಾಮರಾವ್ : ನಿಮ್ಮ ತಲೆ! ನೀರು ಕುಡಿದು ಕುಡಿದು ಬುಟ್ಟಿ ಭಾರ ವಾಗಿರಬೇಕು, ಅಷ್ಟೆ.

ವೆಂಕಮ್ಮ : (ಬಾವಿಯ ಕಡೆ ನೋಡಿ, ಮೂಗುಮುಚ್ಚಿಕೊಂಡು ಅಸಹ್ಯಪಡುತ್ತ) ಥೂ, ದುರ್ವಾಸನೆ ! ಆಗಲೇ ಕೊಳೆಯೋದಕ್ಕೆ ಶುರುವಾಗಿದೆ ಅಂತ ಕಾಣುತ್ತಪ್ಪ.

ಸತ್ಯ : ತಾಳಿ, ಬಾಲು. ಹೀಗಾದರೆ ಆಗೋಲ್ಲ. ನಾನು ಹೋಗಿ, ಎಲ್ಲಿಂದಲಾದರೂ ಒಂದು ಪಾತಾಳಗರಡಿ ಸಂಪಾದಿಸಿ ಕೊಂಡು ಬರ್ತೀನಿ.

ವೆಂಕಮ್ಮ : ಪಾತಾಳ ಗರಡೀಗೆ ಸಿಕ್ಕಿಕೊಂಡು ಆ ಸತ್ತ ಬೆಕ್ಕು ಛಿದ್ರ ಛಿದ್ರವಾಗಲಿ, ಆಮೇಲೆ ಆ ನೀರನ್ನ ಯಾರೂ ಉಪ ಯೋಗಿಸೋದಕ್ಕೆ ಆಗೋದಿಲ್ಲ. ಬಾವೀನ ಮುಚ್ಚಿಸ ಬೇಕಾಗುತ್ತೆ.

ಶಾಮರಾವ್ : (ಕೋಪದಿಂದ) ನೀವು ಅದನ್ನ ಅಷ್ಟಕ್ಕೆ ಬಿಡ್ತೀರೋ ಇಲ್ಲವೊ ?! ಬೆಳಗಿನಿಂದ ನಿಮಗೆ ಯಾಕೋ ಹುಡುಗಾಟ ವಾಗಿ ಹೋಯಿತು. ಅದು ನಿಮ್ಮ ಕೈಯಲ್ಲಿ ಆಗೋ ಕೆಲಸವಲ್ಲ.

ವೆಂಕಮ್ಮ : (ಸತ್ಯನಿಗೆ) ಪಾತಾಳಗರಡಿ ಬದಲು, ಹೋಗಿ ಆ ಗಂಗ ಎಲ್ಲಿದಾನೆ ಅಂತಲಾದರೂ ಹುಡುಕಿಕೊಂಡು ಬಾರೊ.

ನಿನಗೆ ಪುಣ್ಯ ಬರುತ್ತೆ. ಅವನು ಬಂದು ಕೆಲಸ ಮುಗಿಸಿ ಹೋದರೆ ನಾನೂ ಪುರಾಣಕ್ಕೆ ಹೋಗಬಹುದು.

ಸತ್ಯ : ಅವನು ಈಗ ಸಂಜೆ ಹೊತ್ತಿನಲ್ಲಿ ಎಲ್ಲಿ ಸಿಗ್ತಾನೆ, ಎಂಕಮ್ಮನೋರೆ. ನಾಳೆ ಬೆಳಗಿನ ತನಕ ಅವನ ಯೋಚನೆ ಬಿಟ್ಟು ಬಿಡಿ.

ವೆಂಕಮ್ಮ : ಹಾಗೆಯೇ ಹೊಳೇತಡೀಲಿ ಒಂದು ಸುತ್ತು ಹಾಕಿಕೊಂಡು ಬಾರೊ. ಎಲ್ಲಿಯಾದರೂ, ಮೀನುಗೀನು ಹಿಡೀತಾ ಇದ್ದಾನು, ನಾನು ಹೇಳಿ ಕಳಿಸಿದೀನಿ. ಈಗಲೇ ಬರಬೇಕಂತೆ ಅಂತ ಹೇಳು. ಬೇಕಾದರೆ ಜತೇಗೆ ಬಾಲೂನೂ ಕರಕೊಂಡು ಹೋಗು.

ಬಾಲು : ನಾನು ಹೇಳಲೇನೋ ಅವನು ಎಲ್ಲಿ ಇರ್ತಾನೆ ಅಂತ. 'ಕುಂಟುಕತ್ತೆ ಎಲ್ಲಿ ಅಂದರೆ ಪಾಳು ಗೋಡೆ ಪಕ್ಕದಲ್ಲಿ' ಅಂದಹಾಗೆ ಮೀನು ಮಾರಿ ಪಡಖಾನೇಲಿ ಕುಡೀತಾ ಕೂತಿರ್ತಾನೆ.

ವೆಂಕಮ್ಮ : ಹೋಗಲಿ ಬಿಡೀಪ್ಪ, ಆದದ್ದು ಆಗುತ್ತೆ, ನೀವು ಮಕ್ಕಳು ಅಲ್ಲೆಲ್ಲಾ ಹೋಗೋಣ ಅಂದರೇನು.

ಸತ್ಯ : ನೋಡೋಣ, ತಾಳಿ.

(ಅದೇ ಹೊತ್ತಿಗೆ ಗೇಟಿನ ಶಬ್ದವಾಗುತ್ತದೆ)

ವೆಂಕಮ್ಮ : ಗೇಟು ಶಬ್ದವಾಯಿತು. ಯಾರು ನೋಡು, ಗಂಗನೇ ಬಂದನೋ ಏನೋ.

(ಬಾಲು ಗೇಟಿನ ಕಡೆಗೆ ಹೋಗುತ್ತಾನೆ. ಜತೆಜತೆಗೇ ಸತ್ಯನೂ ನಡೆದು, ರಂಗದಾಚೆ ಹೋಗುತ್ತಾನೆ.)

ಬಾಲು : ಯಾರೋ ಅದು ? (ಕಂಬದ ಮರೆಯಲ್ಲಿ ನಿಂತ ಗುಂಡನನ್ನು ನೋಡಿ) ಅಜ್ಜಿ, ಗುಂಡ ಬಂದು ಗೇಟಿನ ಹತ್ತಿರ ಕಾಯ್ತಿದಾನೆ.

ವೆಂಕಮ್ಮ : ಇಷ್ಟು ಹೊತ್ತು ಎಲ್ಲಿ ಹಾಳಾಗಿ ಹೋಗಿದ್ದನಂತೆ ? ಒಳಗೆ ಬಂದು ಕೊಡ ತೊಗೊಂಡು ಹೋಗು. ಅನ್ನು.

ಗುಂಡ : (ತಲೆತಗ್ಗಿಸಿ, ಕಾಲಿನಿಂದ ನೆಲಕೆರೆಯುತ್ತ, ರಾಗವಾಗಿ) ದುಡ್ಡು.

ಬಾಲು : ಅದೇನೋ ದುಡ್ಡು ಕೇಳ್ತಿದಾನೆ, ಅಜ್ಜಿ.

ವೆಂಕಮ್ಮ : ಯಾವ ದುಡ್ಡಂತೆ ?

ಬಾಲು : (ಗುಂಡನಿಗೆ) ಯಾವ ದುಡ್ಡೊ ?

ಗುಂಡ : ಬೆಳಗ್ಗೆ ನೀರು ತಂದುಕೊಟ್ಟದ್ದು.

ವೆಂಕಮ್ಮ : ನಿನ್ನ ದುಡ್ಡೆಲ್ಲಿ ಹೋಗುತ್ತೆ, ಆಮೇಲೆ ಒಟ್ಟಿಗೆ ಕೊಡೋಣಂತೆ. ಹೋಗು, ಮೊದಲು ಹೋಗಿ ಹೊತ್ತು ಕಂತುವ ಮೊದಲು ಬೇಗ ಬೇಗ ಇನ್ನೊಂದು ನಾಲ್ಕು ಕೊಡ ನೀರು ತಂದುಬಿಡು, ಬೆಳಗಿನವರೆಗೆ ಆಗುತ್ತೆ.

ಗುಂಡ : ಉಹ್ಲೂ, ನಮ್ಮ ತಂದೆ ಬೈದರು, ಅಷ್ಟು ಅಗ್ಗಕ್ಕೆ ಯಾಕೆ ಒಪ್ಪಿಕೊಂಡೆ ಅಂತ. ದಿನಕ್ಕೆ ಎಂಟಾಣೆ ತುಂಬಾ ಕಡಿಮೆ, ಕೊಡಕ್ಕೆ ಎಂಟಾಣೆ ಕೊಡೋದಾದರೆ ತಂದು ಕೊಡು. ಇಲ್ಲದೇ ಹೋದರೆ ವಾಪಸು ಬಂದುಬಿಡು ಅಂದರು.

ವೆಂಕಮ್ಮ : ಏನೋ ಇದು ! ಕೇಳೋದಕ್ಕೂ ಒಂದು ಮಿತಿ ಬೇಡವೆ ? ನೀನು ಹೋಗಿ ನೀರು ತಗೊಂಡುಬಾ. ಆಮೇಲೆ ನಿಮ್ಮ ತಾಯೀನ ಕರೆದು ಮಾತಾಡಿ, ನಾನು ಸರಿಯಾಗಿ ಲೆಕ್ಕಾಚಾರ ಹಾಕಿ ಕೊಡ್ತೀನಿ.
(ಗುಂಡ ಕಲ್ಲುಗುಂಡಾಗಿ ನಿಂತಲ್ಲಿಯೇ ನಿಂತಿದ್ದಾನೆ)
ಹೋಗು, ಗುಂಡ. ನೀನು ಒಳ್ಳೆಯ ಹುಡುಗ. ತೊಗೊಂಡು ಬಾ. ಇವತ್ತು ರಾತ್ರಿಯಿಂದ ಒಂದೊಂದು ಹಿಡಿ ಭಿಕ್ಷಾನ್ನ ಜಾಸ್ತಿ ಹಾಕ್ತೀನಿ. ಮೇಲೆ ಸ್ವಲ್ಪ ಸಾರೊ, ಪಲ್ಯವೊ ಕೊಡೋಣಂತೆ, ಹೋಗು.

ಗುಂಡ : ನಮ್ಮ ತಂದೆ ಹೇಳಿದ್ದರು, ಹೀಗೇನಾದರೂ ಊಟ ತಿಂಡಿಯ ಆಸೆ ತೋರಿಸಿ, ಪುಸಲಾಯಿಸಿ ಕೆಲಸ ಮಾಡಿಸಿಕೋತಾರೆ, ಹುಷಾರು ಅಂತ.

ಶಾಮರಾವ್ : (ಕೂತಲ್ಲಿಂದಲೇ ರೇಗಿ, ಏಳುತ್ತ) ಹೊಡೆದಟ್ಟಿರೊ ಆ ಕತ್ತೇ ಭಡವನ್ನ !

ವೆಂಕಮ್ಮ : ನೀನು ಸುಮ್ಮನಿರು, ಮಗು. ಅವನ ಮೇಲೆ ರೇಗಾಡಿ ಅಟ್ಟಿಬಿಟ್ಟರೆ ಹೊಳೆಯಿಂದ ಏನು ನೀನು ನೀರು ತರ್ತೀಯಾ ? ಅಥವಾ, ಈ ವಯಸ್ಸಿನಲ್ಲಿ ನಾನು ಹೋಗಿ ತರಲೊ ? ನಮ್ಮ ಕೈಯಲ್ಲಾಗದ ಕೆಲಸಕ್ಕೆ ಇನ್ನೊಬ್ಬರ ಕಾಲಃ ಕಟ್ಟಲೇಬೇಕು.

ಗುಂಡ : (ಅಳುತ್ತ, ಬೈದುಕೊಂಡು ಹೋಗುವನು) ನಿಮ್ಮ ಭಿಕ್ಷಾನ್ನಕ್ಕೆ ನಾನೇನೂ ಬೇತುಕೊಂಡಿಲ್ಲ. ಹೋಗ್ರಿ, ನನ್ನ ಎಂಟಾಣೇನೂ ಇಟ್ಟುಕೊಂಡು ಇನ್ನೊಂದು ಹೊಸ ಬಾವಿ ತೋಡಿಸಿಕೋ ಹೋಗ್ರಿ.

ಬಾಲು : (ಅವನನ್ನು ಹೊಡೆಯಲು ಅಟ್ಟಿಸಿಕೊಂಡು ಹೋಗುವನು) ಇನ್ನೊಂದು ಸಲ ಈ ಕಡೆ ಕಾಲಿಡು, ಮಾಡ್ತೀನಿ.

[ಬಾಲು ಹಿಂದಿರುಗಿ ಬರುವಾಗ ಗೇಟ್ ಹಾಕಿಕೊಂಡು ಬರುತ್ತಾನೆ. ಅಷ್ಟರಲ್ಲಿ ವೆಂಕಮ್ಮ ಒಳಗೆ ಹೋಗಿದ್ದಾಳೆ. ಶಾಮರಾವ್ ಕುರ್ಚಿಯ ಮೇಲೆ ಕೂತು ಬೇರೇನೂ ಮಾಡಲು ತೋಚದೆ ದಿನಪತ್ರಿಕೆ ಬಿಚ್ಚುತ್ತಾನೆ. ಗೇಟಿನ ಆಚೆ ಕಡೆಯಿಂದ 'ಟಕ್ ಟಕ್' ಎಂದು ಯಾರೋ ಕೋಲೂರಿ ನಡೆದು ಬರುತ್ತಿರುವ ಶಬ್ದ.]

ಬಾಲು : ಅಣ್ಣ, ಸಿಗ್ನಲ್ ಬರ್ತಿದೆ. ಕುಂಟಯ್ಯಂಗಾರ್ಯರು ಬರ್ತಿದಾರೆ.

ಶಾಮರಾವ್ : (ಮುಖದ ಮೇಲೆ ಜುಗುಪ್ಸೆ, ಬೇಸರಗಳನ್ನು ತೋರಿಸುತ್ತ) ಇವನೊಬ್ಬ !...ಅವನಾಗಿಯೇ ಬಂದರೆ ಬಂದುಕೊಂಡು ಹೋಗಲಿ. ನೀನು ಕರೆಯೋಕ್ಕೆ ಹೋಗ ಬೇಡ. ನೋಡಿದರೂ ನೋಡದ ಹಾಗೆ ಬಂದುಬಿಡು.

[ಶಾಮರಾವ್ ಆ ಕಡೆ ನೋಡುವುದನ್ನು ತಪ್ಪಿಸಿಕೊಳ್ಳಲು ದಿನಪತ್ರಿಕೆಯಿಂದ ಮುಖಮುಚ್ಚಿಕೊಳ್ಳುತ್ತಾನೆ. ಅಳಸಿಂಗ ರಾಚಾರ್ ತಾನಾಗಿಯೇ ಗೇಟು ತೆಗೆದು ಒಳಬಂದು,

ಮತ್ತೆ ಗೇಟು ಹಾಕಿ, ಕೋಲೂರಿಕೊಂಡು ಎಳೆದೆಳೆದು ಕಾಲು ಹಾಕುತ್ತ ನಿಧಾನವಾಗಿ ನಡೆದುಕೊಂಡು ಬರುತ್ತಾನೆ. ಆತನ ಕೈಯಲ್ಲಿ ಕೈಚೀಲವೊಂದಿದೆ.]

ಅಳಸಿಂಗರು : ಏನು ಶ್ಯಾಮರಾವ್...ಹೇಗಿದಿ ? ಏನು ನಡೆದಿದೆ ?

ಶಾಮರಾವ್ : (ವಿಧಿಯಿಲ್ಲದೆ ಮುಖದಿಂದ ದಿನಪತ್ರಿಕೆ ಸರಿಸುತ್ತ ಬೇಸರದ ಧ್ವನಿಯಲ್ಲಿ) ಇದೇ ಪ್ರಶ್ನೆ ನಿನ್ನೆ ಸಂಜೆಯೂ ಕೇಳಿದ್ದೆ, ಮೊನ್ನೆ ಸಂಜೆಯೂ ಕೇಳಿದ್ದೆ. ಇಪ್ಪತ್ತು ವರ್ಷದಿಂದ ಸಾಧಾರಣವಾಗಿ ದಿನಾ ಸಂಜೆ ಕೇಳಿಕೊಂಡೇ ಬಂದಿದಿ. ಏನು, ನಿನಗೆ ಉತ್ತರ ಕೊಡೋಕ್ಕೆ ಅಂತ ದಿನಕ್ಕೆ ಒಂದೊಂದು ತರಹ ಇರೋದಕ್ಕೆ ಆಗುತ್ತೆಯೆ ?

ಅಳಸಿಂಗರು : ದಿನಕ್ಕೆ ಒಂದೊಂದು ತರಹ ಇರೋದಕ್ಕೆ ಆಗದೇ ಹೋದರೂ ಇವತ್ತಂತೂ ಬೇರೆ ತರಹ ಇದೀಯೋ ಅನ್ನೋದು ಖಂಡಿತ...ಅದು ನಿನ್ನ ಧ್ವನಿಯಿಂದಲೇ ಗೊತ್ತಾಗುತ್ತೆ. (ಹೇಳಿಸಿಕೊಳ್ಳದೆ ಕುರ್ಚಿಗೆ ವಾಕಿಂಗ್‌ಸ್ಟಿಕ್ ನೇತು ಹಾಕಿ ಅಚ್ಚುಕಟ್ಟಾಗಿ ಕುರ್ಚಿಯ ಮೇಲೆ ಕೂತು ಬೆವರೊರೆಸಿಕೊಳ್ಳುತ್ತ) ಶ್ರೀ ರಂಗನಾಥ ! ಶೇಷಶಯನ ! ...ಉಸ್ಸ್, ಹಾಗೆಯೇ ಬಂದೆ. ಇವೊತ್ತು ನವಗ್ರಹಶಾಂತಿಯಾಗಲಿ ಅಂತ ಶ್ರೀರಂಗನಾಥ ಅಪ್ಪಣೆ ಕೊಡಿಸಿದ. ಎಲ್ಲ ಸಾಂಗವಾಗಿ ನೆರವೇರಿತು. ಪ್ರಸಾದ ಕೊಟ್ಟು ಹೋಗೋಣ ಅಂತ ಬಂದೆ.

ಶಾಮರಾವ್ : ನೀನೇನು ಮಾಡತಿ ಹೇಳು. ಮನೇಲಿ ಮಗಳು, ಮೊಮ್ಮಗನ್ನ ಬಿಟ್ಟು ಬೇರೆ ಯಾರೂ ಇಲ್ಲ. ಮಾಡೋದಕ್ಕೆ ಕಸಬಿಲ್ಲ. ಹೊತ್ತು ಹೋಗೋಲ್ಲ. ಏನಾದರೂ ನೆಪಮಾಡಿಕೊಂಡು ದಿನಾ ಸಂಜೆ ಬಂದು ಬಿಡ್ತಿ.

ಅಳಸಿಂಗರು : (ನಾಚಿಕೆಯಿಂದ ನಗುತ್ತ, ಚೀಲದಿಂದ ನಾಲ್ಕು ಸಣ್ಣ ಸಣ್ಣ ಹಣ್ಣುಗಳಿರುವ ಒಂದು ಚಿಪ್ಪು ಬಾಳೆಹಣ್ಣು,

ಒಂದು ಚೂರು ತುಳಸಿ, ಒಂದು ಕುಂಕುಮದ ಪೊಟ್ಟಣ ಗಳನ್ನು ತೆಗೆದು, ಚಿಪ್ಪಿನಿಂದ ಒಂದು ಬಾಳೆಹಣ್ಣನ್ನು ಮುರಿದು, ಎದ್ದು ನಿಂತು, ಭಕ್ತಿಯಿಂದ ಅದನ್ನು ಶಾಮರಾಯನ ಕೈಗೆ ನೀಡುತ್ತ) ತೊಗೊ, ಪ್ರಸಾದ. ಕಣ್ಣಿಗೊತ್ತಿಕೊಂಡು ಬಾಯಿಗೆ ಹಾಕಿಕೊ.

ಶಾಮರಾವ್ : (ಅದರ ಬಗ್ಗೆ ಯಾವ ಉತ್ಸಾಹವನ್ನೂ ತೋರಿಸದೆ, ತೆಗೆದುಕೊಂಡು ಮೇಜಿನ ಮೇಲಿಡುತ್ತ) ಈ ಕಪಿಬೆರಳ ಬಾಳೆಹಣ್ಣಿನ ಪ್ರಸಾದ ಕೊಡೋಕ್ಕೆ ಅಲ್ಲಿಂದ ಇಲ್ಲೀಗೆ ಕುಂಟುಗಾಲನ್ನೂ ಎಳಕೊಂಡು ಬರಬೇಕಾಗಿತ್ತೆ ? ಮನೇಲಿ ನಿನ್ನ ಮೊಮ್ಮಗನಿಗೆ ಕೊಟ್ಟಿದ್ದಿದ್ದರೆ ಸಂತೋಷ ದಿಂದ ತಿಂದುಕೊಂಡಿರೋವ !

ಅಳಸಿಂಗರು : ಶಾಂತಂ ಪಾಪಂ ! ಹಾಗಂತಾರೆಯೇ ? ಅದು ಪ್ರಸಾದ ! 'ಬಿಡುತು' ಅನ್ನು.

ಶಾಮರಾವ್ : ಮುಂದಿನ ಸಲದಿಂದ ಪೊಂಗಲು, ಪುಳಿಯೋಗರೆ ನೈವೇದ್ಯ ಮಾಡೋಕ್ಕಾದರಷ್ಟೇ ಪೂಜೆ ಪುನಸ್ಕಾರ ಇಟ್ಕೊಕೊ. ಕನಿಷ್ಠ, ಇಲ್ಲೀತನಕ ಅದರ ಸುದ್ದಿ ತರೋಕ್ಕೆ ಹೋಗ ಬೇಡ (ತನ್ನ ಹಾಸ್ಯಕ್ಕೆ ತಾನೇ ನಗುವನು).

ಅಳಸಿಂಗರು : ಕ್ವಾಣ್ಣಿ, ಬಾಲು. ಈ ಪ್ರಸಾದಾನ ತೊಗೊಂಡು ಹೋಗಿ ಒಳಗೆ ಕೊಡು. ಈ ಅಡಿಯನ ಮನೇಲಿ ಇವೊತ್ತು ನವಗ್ರಹಶಾಂತಿ ಅಪ್ಪಣೆಯಾಗಿತ್ತಂತೆ ಅಂತ ಹೇಳು. ಎಲ್ಲರೂ ತೊಗೊಳ್ಳಿ...ಹಾಗೆಯೇ ಬರತಾ, ಒಂದು ಚೊಂಬು ತಣ್ಣಗೆ ತೀರ್ಥ ತೊಗೊಂಡು ಬಾ, ಮಗೂ.

ಶಾಮರಾವ್ : ಬೆಳಗಿನಿಂದ ನೀರಿಗೆ ದಿಕ್ಕಿಲ್ಲದೆ ಒದ್ದಾಡ್ತಿದೀವಿ, ಇವನಿಗೆ 'ಚೆಂಬಲ್ಲಿ' ತಣ್ಣಗೆ ತೀರ್ಥವಂತೆ ತೀರ್ಥ !

ಅಳಸಿಂಗರು : ಮನೇಲಿ ನೀರಿಗೆ ದಿಕ್ಕಿಲ್ಲ ಅನ್ನೋದಕ್ಕೆ ನೀನೇನು ನಮ್ಮ ಹಾಗೆ ಹೊಳೆಯಿಂದ ನೀರು ಹೊರಬೇಕೆ ? ದೇವರು ಕೊಟ್ಟಹಾಗೆ ಮನೆಯ ಮುಂದೆ ಅಂತಹ ಸೀನೀರಿನ

ಬಾವಿಯಿದೆ. ಕೈಚಾಚಿ ಮೊಗೆದುಕೊಳ್ಳಬಹುದು.

ಶಾಮರಾವ್ : ನಮ್ಮ ಬಾವಿ ಕಷ್ಟ ನಮಗೆ ಗೊತ್ತು.
(ಬಾಲು ಲೋಟದಲ್ಲಿ ನೀರು ತಂದುಕೊಡುವನು.)

ಶಾಮರಾವ್ : ನೋಡು, ಎಷ್ಟು ಬೇಕೋ ಅಷ್ಟೇ ಇಸಕೊಂಡು ಕುಡಿ. ಸುಮ್ಮನೆ ದಂಡ ಮಾಡಬೇಡ.

ಅಳಸಿಂಗರು : (ಲೋಟವನ್ನು ಮೇಲೆತ್ತಿ ಗಟಗಟನೆ ನೀರನ್ನು ಕುಡಿದು ಮುಗಿಸಿ) ಶ್ರೀ ರಂಗನಾಥ ! ಶೇಷಶಯನ !... ಅದೇನು ನಿಮ್ಮ ಬಾವಿಯ ಕಷ್ಟ ? ಬಂದು ನಿನ್ನ ಹತ್ತಿರ ಹೇಳಿಕೊಂಡಿತೆ, 'ನನಗೆ ಸಾಕಾಯ್ತು, ಇನ್ನು ನೀರು ಕೊಡೋಲ್ಲ' ಅಂತ ?

ಶಾಮರಾವ್ : (ಕೊಂಚ ಸಡಿಲಗೊಳ್ಳುತ್ತ) ಅದು ಬಂದು ಹೇಳಲಿಲ್ಲ, ಬೆಕ್ಕಿನ ಕಡೆಯಿಂದ ಹೇಳಿಸಿತು.

ಅಳಸಿಂಗರು : ಬೆಕ್ಕು ? ಬೆಕ್ಕಿನ ಕಡೆಯಿಂದ ಹೇಳಿಸಿತು ? ಏನೋ ಅದು, ಒಗಟು ಒಗಟಾಗಿ ಮಾತಾಡ್ತಿದಿ ? ಬಿಡಿಸಿ ಹೇಳು.

ಶಾಮರಾವ್ : (ಮಗನ ಕಡೆ ಕೈ ತೋರಿಸುತ್ತ) ಅವನನ್ನ ಕೇಳು, ಹೇಳ್ತಾನೆ. ಇವತ್ತು ಬೆಳಗಿನ ಜಾವ...

ಬಾಲು : (ತಂದೆಯ ಕಥನವನ್ನು ಮುಂದುವರಿಸುತ್ತ) ಇನ್ನೂ ಮಸಕು ಮಸಕು. ಉಚ್ಚೆ ಹುಯ್ಯೋಕ್ಕೆ ಎಚ್ಚರವಾಯಿತು. ಬಾಗಿಲು ತೆಕ್ಕೊಂಡು ಹೊರ ಬಂದೆ. ಬಾವಿ ಕಟ್ಟೆಯ ಮೇಲೆ ಆ ಕರಿಯ ಪಟ್ಟೆಬೆಕ್ಕು ಕೂತುಕೋಡು ಹೋಚು ಹಾಕ್ತಿದೆ. ಎಲ್ಲಿ ಕಾಲುಜಾರಿ ಬಾವಿಗೆ ಬಿದ್ದುಬಿಡುತ್ತೊ ಅನ್ನೋ ಹಾಗೆ ಅಂಚಿನಲ್ಲೇ ಕೂತಿದೆ. ಓಡಿಸೋಣ ಅಂತ ಹೋದೆ, ದುಡುಂ ಅಂತ ಬಾವಿಯೊಳಕ್ಕೆ ಉರುಳಿ ಕೊಂಡಿತು.

ಅಳಸಿಂಗರು : (ಗೊಳ್ಳನೆ ನಗುತ್ತ) ಚೆನ್ನಾಗಿದೆ ಕಥೆ !

ಬಾಲು : ಕಥೆ ಯಾಕಂತೆ ?

ಅಳಸಿಂಗರು : ಬೆಕ್ಕು ಬಾವಿಯೊಳಕ್ಕೆ ಬೀಳೋಣ ಅಂದರೇನೋ ? ನೀನ್ನ

ಬಿದ್ದದ್ದು ನೋಡಿದೆಯಾ ?

ಬಾಲು : ಅದು 'ಧೊಪ್' ಅಂತ ಬಿದ್ದ ಶಬ್ದ ನಾನೇ ಕೇಳಿದೀನಿ.

ಶಾಮರಾವ್ : ಎದ್ದ ಮೇಲೆ ಹಿಂಗಾಯಿತು ಅಂತ ಹೇಳಿದ. ಬಾವಿ ಒಳಗೆ ಬಗ್ಗಿ ನೋಡಿದರೆ ಬೆಕ್ಕು ಆಗಲೇ ಸತ್ತು ಮೇಲೆ ತೇಲ್ತಿದೆ.

ಆಳಸಿಂಗರು : (ಯಾವದೊ ಸಮಸ್ಯೆಗೆ ಸಿಕ್ಕಿದವನಂತೆ) ನಿಜವಾಗಿ ತೇಲ್ತಿತ್ತೆ ? ನೀವು ಚೆನ್ನಾಗಿ ನೋಡಿದಿರಾ ?

ಬಾಲು : ತೇಲ್ತಿತ್ತು ಯಾಕೆ, ಇನ್ನೂ ತೇಲ್ತಿದೆ—ಕರ್‍ರಗೆ ಒಂದು ಕುಪ್ಪೆ ! ಬನ್ನಿ ನೋಡೋರಂತೆ ನಿಮಗೂ ತೋರಿಸ್ತೀನಿ (ಬಾಲು, ಆಳಸಿಂಗರು ಬಾವಿಯ ಹತ್ತಿರ ಹೋಗುತ್ತಾರೆ. ಆಳಸಿಂಗರು ಕ್ಷಣಕಾಲ ಬಾವಿಯೊಳಗೆ ಬಗ್ಗಿ ನೋಡಿ, ಬಾಲುವನ್ನು ಏನೋ ಕೇಳುತ್ತಾನೆ. ಬಾಲು ಉತ್ತರ ಕೊಡುತ್ತಾನೆ. ಅವನ ಮಾತು ಸಭಿಕರಿಗೆ ಕೇಳಿಸುವುದಿಲ್ಲ. ಮಾತಿನ ಜತೆಯ ನಟನೆಯಷ್ಟೇ ಕಾಣಿಸುತ್ತದೆ. ಆ ಕೈಸನ್ನೆಯಿಂದ ಅವನು ಬೆಕ್ಕನ್ನು ಓಡಿಸಲು ಏನನ್ನೋ ಎತ್ತಿ ಎಸೆದನೆಂಬುದು ತಿಳಿಯುತ್ತದೆ. ಕೊನೆಗೆ ಆಳಸಿಂಗರು ಮತ್ತೊಮ್ಮೆ ಬಾವಿಯೊಳಗೆ ಬಗ್ಗಿ ನೋಡಿ, ಜೋರಾಗಿ ನಗುವುದು ಕೇಳುತ್ತದೆ.)

ವೆಂಕಮ್ಮ : (ಒಳಗಿನಿಂದ ಬಂದು ಶಾಮರಾಯನ ಜತೆ ಮಾತಾಡು ತ್ತಿದ್ದವಳು) ಅದರಿಂದಾಗಿಯೇ ಬೆಳಗಿನಿಂದ ನೀರಿಗೆ ಸಮಸ್ಯೆಯಪ್ಪ. ನಿನ್ನೆ ಕೊಳದಪ್ಪಲೆ, ಬಿಂದಿಗೆಗಳಲ್ಲಿ ತುಂಬಿಟ್ಟಿದ್ದ ನೀರೆಲ್ಲವೂ ಮುಗೀತು. ಇಲ್ಲಿ ಸುತ್ತು ಮುತ್ತಲಲ್ಲಿ ಎಲ್ಲರ ಬಾವಿಯ ನೀರೂ ಉಪ್ಪು. ಆ ನಂಜುಂಡ ಭಟ್ಟರ ಮಗ ಭಿಕ್ಷಾನ್ನದ ಗುಂಡನನ್ನ ಹಿಡಿದು, ಹೊಳೆಯಿಂದ ಎರಡು ಸಲ ಎರಡೆರಡು ಕೊಡ ನೀರು ತರಿಸಿದ್ದಾಯಿತು.

ಶಾಮರಾವ್ : ದಿನಕ್ಕೆ ಎಂಟಾಣೆಗೆ ಒಪ್ಪಿಕೊಂಡಿದ್ದವನು ಈಗ ಒಂದು ಕೊಡಕ್ಕೆ ಎಂಟಾಣೆ ಕೊಡಬೇಕು ಅಂತ ತಕರಾರು ಮಾಡಿ

ಹೋದ.

(ಅಳಸಿಂಗರು ಬಾವಿ ಬಿಟ್ಟು ಬಂದು ಕುರ್ಚಿಯ ಮೇಲೆ ಕೂರುವನು.)

ಅಳಸಿಂಗರು : ಬಾವಿಯಿಂದ ಬೆಕ್ಕನ್ನು ತೆಗೆಸೋಕ್ಕೆ ಏನೂ ಏರ್ಪಾಡು ಮಾಡಲಿಲ್ಲವೆ, ಶಾಮಿ ?

ಶಾಮರಾವ್ : ಮಾಡದೇ ಏನು ?

ಅಳಸಿಂಗರು : (ಕೊಂಚ ಪೆಚ್ಚಾಗಿ, ಆದರೂ ತೋರಗೊಡದೆ) ಏನು, ಏರ್ಪಾಡು ಮಾಡಿ ಆಗಿದೆಯೆ ?

ಶಾಮರಾವ್ : ಆಗಿದೆ ಅಂದರೆ ಆಗಿತ್ತು, ಆಗಿಲ್ಲ. ಬೆಳಗ್ಗೆ ಆ ಬೆಸ್ತರ ಗಂಗನಿಗೆ ಹೇಳಿ ಕಳಿಸಿದ್ದೆ. ದುಡ್ಡು ಕಾಸು ಮಾತಾಡಿ, ತೆಗೆದು ಹಾಕೋಕ್ಕೆ ಒಪ್ಪಿಕೊಂಡು, 'ಈಗ ಬರ್‍ತೀನಿ, ಬುದ್ಧಿ' ಅಂತ ಹೇಳಿ ಹೋದವನು ಇನ್ನೂ ಬಂದಿಲ್ಲ, ನೋಡು.

ವೆಂಕಮ್ಮ : ಹಿಂದೆ ಒಂದೆರಡು ಸಲ ಬಿಂದಿಗೆ, ಚೆಂಬು ಬಿದ್ದಾಗ ಬಂದು ತೆಕ್ಕೊಟ್ಟು ಹೋಗಿದ್ದ. ನಿಯತ್ತಿನ ಆಸಾಮಿ. ಆದರೆ ಇವೊತ್ತು ಹೀಗೇಕೆ ಮಾಡಿದನೊ ? ಈ ಸುತ್ತು ಮುತ್ತಲಲ್ಲಿ ಅವನನ್ನ ಬಿಟ್ಟರೆ ಬಾವಿಗೆ ಇಳಿಯೋಕ್ಕೆ ಬರೋರು ಬೇರೆ ಯಾರೂ ಇದ್ದ ಹಾಗೆ ಇಲ್ಲ.

ಶಾಮರಾವ್ : ದೊಡ್ಡ ಪಟ್ಟಣವೊ, ನಗರವೊ ಆಗಿದ್ದಿದ್ದರೆ ಬೇರೆ ಮಾತಾಗಿರೋದು. ಒಂದು ಫೋನ್ ಮಾಡಿದ್ದಿದ್ದರೆ ಫೈರ್ ಬ್ರಿಗೇಡ್‌ನವರು ಬಂದು ಒಂದು ನಿಮಿಷದಲ್ಲಿ ಕೆಲಸ ಮುಗಿಸಿ ಹೋಗಿರೋರು.

ವೆಂಕಮ್ಮ : ತೆಗೆಸಿದ ಮೇಲೆ ಸಹ ಆ ನೀರನ್ನ ಹೇಗೆ ಕುಡಿಯೋದಕ್ಕೆ ಉಪಯೋಗಿಸೋದೊ ನಾನು ಬೇರೆ ಕಾಣೆ. ಸತ್ತ ಬೆಕ್ಕು ಅದೇನು ಕೊಳೆತಿರುತ್ತೊ, ನಾರಿರುತ್ತೊ ?

ಅಳಸಿಂಗರು : ನೀವು ಅದನ್ನೆಲ್ಲ ಯೋಚನೆ ಮಾಡಿ. ತಲೆ ಕೆಡಿಸಿಕೋ ಬೇಡಿ, ತಾಯಿ. ಒಂದು ಥಡಿಯ ಸುಣ್ಣ ತರಿಸಿ ಹಾಕಿಸಿ,

ಎರಡು ದಿನ ಬಿಟ್ಟುಬಿಡಿ. ಆಮೇಲೆ ಪುರೋಹಿತರನ್ನ ಕರಸಿ ಒಂದು ಪುಣ್ಯಾವರ್ಚನೆ ಮಾಡಿಸಿಬಿಡಿ. ಮೊದಲೊಂದೆರಡು ದಿನ ಮನಸ್ಸಿಗೆ ಕಸವಿಸಿಯಾಗುತ್ತೆ, ನಿಜ. ಆಮೇಲೆ ಎಲ್ಲಾ ಮರೆತೂ ಹೋಗುತ್ತೆ, ಅಭ್ಯಾಸವೂ ಆಗುತ್ತೆ.

ವೆಂಕಮ್ಮ : ಹಾಗಂತೀಯಾ ?

ಶಾಮರಾವ್ : ಅವೆಲ್ಲ ಆಮೇಲಿನ ಮಾತು. ಮೊದಲು ಆ ಗಂಗ ಯಾವಾಗ ಬರ್ತಾನೋ, ಬರೋದೇ ಇಲ್ಲವೋ ? ಅಲ್ಲೀ ತನಕ ನೀರಿಗೇನು ಗತಿಯೊ ?

ವೆಂಕಮ್ಮ : ಅಯ್ಯೋ, ಆದದ್ದು ಆಗುತ್ತೆ.

(ವೆಂಕಮ್ಮ ಎದ್ದು ಒಳ ಹೋಗುವಳು)

ಆಳಸಿಂಗರು : ಅಲ್ಲಯ್ಯಾ, ಶ್ಯಾಮರಾವ್, ಬಾವೀಲಿ ಬೆಕ್ಕು ಬಿದ್ದಿದೆ ಅಂತ, ಬಿದ್ದ ಬೆಕ್ಕನ್ನ ತೆಗೆಯೋದಕ್ಕೆ ಬೆಸ್ತರ ಗಂಗ ಬರ ಲಿಲ್ಲ ಅಂತ, ಹೊಳೆಯಿಂದ ನೀರು ತಂದುಕೊಡೋದಕ್ಕೆ ಗಂಡ ಇಲ್ಲ ಅಂತ, ನೀರು ಕುಡಿಯೋದನ್ನ ಬಿಟ್ಟು ಬಿಡೋದಕ್ಕೆ ಆಗುತ್ತೆಯೇ ? ಬದುಕೋದನ್ನ ನಿಲ್ಲಿಸೋ ದಕ್ಕೆ ಆಗುತ್ತೆಯೆ ? ಇಂಥವು ಎಲ್ಲಾ ಕೂಡಿಯೇ ಜೀವನ.

ಶಾಮರಾವ್ : ವೇದಾಂತ ಹೇಳೋದಕ್ಕೇನಂತೆ, ಏನಾದರೂ ಉಪಾಯ ಹುಡುಕೋದು ಬಿಟ್ಟು–

ಆಳಸಿಂಗರು : ಉಪಾಯ ಏನು ? ಅಂತಹ ಸಮಯ ಬಂದರೆ ಹೊಳೇಗೆ ಹೋದಿ ನಾವೇ ನೀರು ತರಬೇಕಪ್ಪ. ನಾವೂ ಒಂದು ಸಲ ಹೊಳೆ ನೋಡಿದ ಹಾಗಾಗುತ್ತೆ. ಅಥವಾ...ಬಾವಿಗಿಳಿದು ಬೆಕ್ಕು ತೆಗೆದುಹಾಕಬೇಕು. ಬಾವಿಯ ಆಳ ನೋಡಿದ ಹಾಗಾಗುತ್ತೆ.

ಶಾಮರಾವ್ : ಹ್ಹ...ಹ್ಹ...ಹ್ಹ...ದುಂಡುದುಂಡಾಗಿ ಮಾತನಾಡೋದು ಸುಲಭ. ನಿಮ್ಮ ಮನೆ ಬಾವೀಲಿ ಬೆಕ್ಕು ಬಿದ್ದಿದ್ದರೆ ನೀನೇ ಬಾವಿಗಿಳಿದು ಅದನ್ನು ತೆಗೆದುಹಾಕ್ತಿದ್ದೆ ಅಲ್ಲವೆ ?

ಅಳಸಿಂಗರು : ಬೆಕ್ಕು ಬೀಳೋದಕ್ಕೆ ನಮ್ಮ ಮನೇಲಿ ಬಾವಿಯೇ ಇಲ್ಲವಲ್ಲೋ ! (ನಗುವನು) ಬಾವಿ ಇದ್ದು ಬೆಕ್ಕು ಬಿದ್ದಿದ್ದಿದ್ದರೆ ಖಂಡಿತ ಇಳಿದು ತೆಗೆದುಹಾಕ್ತಿದ್ದೆ. ಅಷ್ಟೇಕೆ ? ಹಟಕಟ್ಟು. ನಿಮ್ಮ ಬಾವೀಗೇ ಇಳಿದು ಬೆಕ್ಕು ತೆಗೆದುಹಾಕ್ತೀನೋ ಇಲ್ಲವೋ ನೋಡು.

ಶಾಮರಾವ್ : (ಉತ್ತೇಜಿತನಾಗಿ, ಆಸಕ್ತಿ ತೋರಿಸುತ್ತ) ಏನು, ನೀನು ಬಾವಿಗಿಳೀತೀಯಾ ? ಬಾವಿಗಿಳಿಯೋಕ್ಕೆ ಬರುತ್ತೆಯೆ ನಿನಗೆ ?

ಅಳಸಿಂಗರು : ನನಗೆ ಏನು ಬರೋದಿಲ್ಲ ಅಂತ ಕೇಳು. ನಿಮ್ಮ ಬಾವಿ ಎಷ್ಟು ಆಳ ಇದೆ ?

ಶಾಮರಾವ್ : ಏನು, ಒಂದು ಇಪ್ಪತ್ತು ಇಪ್ಪತ್ತೈದು ಅಡಿ ಇರಬೇಕು.

ಅಳಸಿಂಗರು : (ರಾಗವಾಗಿ) ಅಷ್ಟೇನೇ ! ನಾನು ಇಳೀತಿದ್ದ ಬಾವಿಗಳು ಐವತ್ತು, ನೂರು ಅಡೀಗೆ ಕಡಿಮೆ ಇರ್ತಿರಲಿಲ್ಲ.

ಶಾಮರಾವ್ : (ಕೂತಲ್ಲಿಂದಲೇ, ಹುರುಪಿನ ಧ್ವನಿಯಲ್ಲಿ) ಅಮ್ಮಾ, ಅಳಸಿಂಗ್ರಿಗೆ ಬಾವಿಗಿಳಿಯೋಕೆ ಬರುತ್ತಂತೆ...ಅವನೇ ಇಳಿದು ಬೆಕ್ಕು ತೆಗೆದುಹಾಕತಾನಂತೆ !...ಗಟ್ಟಿಗ, ಗಟ್ಟಿಗ ಕಣಯ್ಯಾ.

ಅಳಸಿಂಗರು : ನಿನ್ನ ಹಾಗೆ ನನಗೆ ದೇವರು ಹುಟ್ಟಿಸ್ತಾ ಬಾಯಲ್ಲಿ ಬೆಳ್ಳಿ ಗಿಂಡಿ ಇಟ್ಟು ಕಳಿಸಲಿಲ್ಲ, ಶಾಮಿ. ನಿನಗೆ ಎಲ್ಲಾ ತಿಳಿದಿರೋದೇಯೋ. ನಮ್ಮ ತಾತ, ಮುತ್ತಾತಂದಿರೆಲ್ಲಾ ಹತ್ತು ತಲೆಮಾರಿನಿಂದ ವೇದ ಓದಿ, ಪಾರಾಯಣ ಮಾಡಿ, ಗುಡಿಯ ಅರ್ಚಕರಾಗಿದ್ದವರು. ಲೌಕಿಕವಾಗಿ ಅದಕ್ಕಿಂತ ಮೇಲೇರಿದವರೇ ಅಲ್ಲ. ಅದೇನೋ ನಮ್ಮ ತೀರ್ಥರೂಪರಿಗೆ ನನ್ನನ್ನ ಒಬ್ಬ ದೊಡ್ಡ ಮನುಷ್ಯನನ್ನಾಗಿ ಮಾಡಿಸಿ ತಾವು ಸಂತೋಷಪಡಬೇಕು ಅಂತ ಆಸೆ. ಗಂಟಲಲ್ಲಿ ಗಿಡಿದು ಓದಿಸಿ, ಪ್ಲೀಡರ್ ಪರೀಕ್ಷೆಗೆ ಕಟ್ಟಿಸಿದರು. ಅವರ ಅದೃಷ್ಟವೋ. ನನ್ನ ದುರದೃಷ್ಟವೊ

ಪಾಸಾಗಿಯೇ ಬಿಟ್ಟಿತು. ಮನೆಯ ಮುಂದೆ ಬೋರ್ಡ್ ಬಂತು. ಹೊಸದರಲ್ಲಿ ಒಂದು ನಾಲ್ಕು ತರಲೆ ಕೇಸುಗಳೂ ಬರೋವು—ಬರೋವೇನು, ಅವರೇ ಅಲ್ಲಿಂದ ಇಲ್ಲಿಂದ ಹಿಡಿದು ತರೋರು. ಆ ಬೋರ್ಡ್ನು, ಆ ಕಕ್ಷಿಗಾರರನ್ನ ನೋಡಿಯೇ ಸಂತೋಷಪಟ್ಟುಕೊಳ್ಳೋರು. ಆದರೆ ಸಂಸಾರ ನಡೀತಿದ್ದದ್ದೆಲ್ಲಾ ಅವರು ತರ್ತಿದ್ದ ಮಂಗಳಾರತಿ ತಟ್ಟೆಯ ಕಾಸಿನಿಂದಲೇ. ಅವರು ತಮ್ಮ ಆಸೇಗೆ ನನ್ನನ್ನ ಬಲಿಕೊಡದೆ ಹೋಗಿದ್ದಿದ್ದರೆ, ನಾನೂ ಗುಡಿ ಅರ್ಚಕನಾಗಿ, ನನಗೂ ತಿಂಗಳಿಗೆ ನಾಲ್ಕು ರೂಪಾಯಿ ಸಂಬಳ ದಿನಕ್ಕೆ ನಾಲ್ಕಂಟಾಣೆ ದಕ್ಷಿಣೆ ಬಂದುಕೊಂಡು ಹೋಗಿರೋದು. ಈಗ ಅದೂ ಇಲ್ಲ, ಇದೂ ಇಲ್ಲ ಅಂದಮೇಲೆ ಮರ್ಯಾದೆಯಾಗಿ ಜೀವನೋಪಾಯ ಮಾಡೋಕ್ಕೆ ಒಂದಲ್ಲ ಒಂದು ಹುಡುಕಬೇಕಲ್ಲ.

ಶಾಮರಾವ್ : ಹಾಗಂದುಕೊಂಡು ಏನೂ ಅಂದರೆ ಅದನ್ನ ಮಾಡೋಕ್ಕಾಗುತ್ತೆಯೆ ?

ಅಳಸಿಂಗರು : ಮಾಡಬೇಕಪ್ಪ ! ಸುಮ್ಮನೆ ಬರೀ ತಲೆ ಇಟ್ಟುಕೊಂಡು ಫುಟ್‌ಬಾಲ್ ಉರುಳಿದ ಹಾಗೆ ಉರುಳಿದರೆ ಆಯಿತೆ ? ನಡೆದಾಡೋಕೆ ಕಾಲು ಬೇಡವೆ ? ಮನುಷ್ಯರಾದ ಮೇಲೆ ಎಲ್ಲಾನ್ನೂ ಮಾಡಬೇಕು. ಅಧ್ಯಯನಕ್ಕೆ ಕೈಯಲ್ಲಿ ಪುಸ್ತಕ ಹಿಡಿದಾಗ, ವಾದ–ತರ್ಕ–ಚಿಂತನೆಗೆ ಕೂತಾಗ ಬ್ರಾಹ್ಮಣರಾಗಬೇಕು ; ಕೆಲಸಕ್ಕಿಳಿದಾಗ ಶೂದ್ರರಾಗಬೇಕು, ಹೊಲೆಮಾದಿಗರೂ ಆಗಬೇಕು. ಎಲ್ಲಾ ಸಮವಾಗಿ ಸೇರಿದರೇನೇ ಪುರುಷ ಪೂರ್ಣನಾಗೋದು ಕಣೊ. ಉದಾಹರಣೆಗೆ, ನೀನು ಕಂಡಹಾಗೆ ನಾನು ಏನೇನು ಮಾಡೋಲ್ಲ—ಮನೇಗೆ ಸುಣ್ಣ ಬಣ್ಣ ಬಳೀತೀನಿ. ಹೆಂಚು ಕೈಯಾಡ್ತೀನಿ. ಊರು ನೋಡೋಕ್ಕೆ ಬಂದವರಿಗೆ ಗೈಡ್ ಆಗ್ತೀನಿ. ಸಣ್ಣ ಪುಟ್ಟ ಕಾಯಿಲೆ

ಕಸಾಲೆಗಳಿಗೆ ಔಷಧಿ ಕೊಡ್ತೀನಿ.

ಬಾಲು : (ಇವರ ಮಾತನ್ನು ಉತ್ಸಾಹದಿಂದ ಕೇಳುತ್ತ ಕುಳಿತವನು) ರೀ, ನಿಮಗೆ ತೆಂಗಿನಮರ ಹತ್ತೋಕ್ಕೂ ಬರುತ್ತೆ ಅಲ್ವಾ ?

ಆಳಸಿಂಗರು : ಎಲಾ, ನೀನು ಯಾವಾಗ ನೋಡಿದ್ದೆಯೊ ?

ಶಾಮರಾವ್ : (ವ್ಯಂಗ್ಯವಾಗಿ) ಇನ್ನು ನವರಾತ್ರಿ ಒಂಬತ್ತು ದಿನ ಊರ ಹುಡುಗರನ್ನೆಲ್ಲಾ ಒಟ್ಟುಹಾಕಿ, ನೀನಾಡಿಸೋ ಆ ನಾಟಕಗಳು ?

ಆಳಸಿಂಗರು : ಹೌದಲ್ಲ, ನಾಟಕ !

ಬಾಲು : (ಇವೆಲ್ಲವನ್ನೂ ಬೆರಳಮೇಲೆ ಎಣಿಸುತ್ತಿದ್ದವನು) ಆರಾಯಿತು. ಇನ್ನೆರಡು ಹೇಳಿಬಿಡ್ರಿ. ಗಾದೆ ಪೂರ್ತಿಯಾಗುತ್ತೆ !

ವೆಂಕಮ್ಮ : ಯಾವ ಗಾದೆಯೊ ?

ಬಾಲು : ಅದೇ ಯಾರಿಗೋ...ಎಂಟು ಚೇಷ್ಟೆ ಅಂತಾರಲ್ಲ !

ಆಳಸಿಂಗರು : (ಬಾಲುವಿನ ತಲೆಯನ್ನು ಪ್ರೀತಿಯಿಂದ ಜುಗ್ಗಾಡಿಸುತ್ತ) ಕುಳ್ಳಂಗೆ ?
(ಎಲ್ಲರೂ ಗೊಳ್ಳನೆ ನಗುವರು)

ಶಾಮರಾವ್ : ಹ್ನೂ, ಅದೇನೋ ಬಾವಿಗಿಳಿಯೋ ಮಾತಾಡ್ತಿದ್ದೆಯಲ್ಲ ?

ಆಳಸಿಂಗರು : ಮಾತೇನು ಬಂತು ? ನೀನು 'ಹ್ನೂ' ಅನ್ನು, ಬಾಜಿ ಕಟ್ಟು. ಇಳಿದು ತೋರಿಸಿಯೇ ಬಿಡ್ತೀನಿ. ಹ್ನೂ, ಹೇಳು. ಎಷ್ಟು ಕೊಡ್ತಿ ? ಇಪ್ಪತ್ತು ರೂಪಾಯಿ ? ಇಳೀಲಿಲ್ಲವೊ, ನಾನು ನಿನಗೆ ಇಪ್ಪತ್ತು ಕೊಡ್ತೀನಿ, ಸರಿತಾನೆ ?

ಶಾಮರಾವ್ : ಬರೀ ಇಳಿಯೋದಲ್ಲ. ಇಳಿದು ಬೆಕ್ಕು ತೆಗೀಬೇಕು.

ಆಳಸಿಂಗರು : ಹೌದು, ಅದಕ್ಕೇ ತಾನೇ ಇಳಿಯೋದು.

ಶಾಮರಾವ್ : (ತನ್ನ ಸಮಸ್ಯೆ ಬಗೆಹರಿಯುಲಿರುವುದನ್ನು ಕಂಡು, ಸಂತೋಷದಿಂದ) ಬಾಲು, ಇಬ್ಬರಿಗೂ ಕೊಂಚ ಟೀ ಮಾಡಬೇಕಂತೆ ಅನ್ನೊ.

ಅಳಸಿಂಗರು : ಬಾ...ಲು (ಏನನ್ನೋ ಹೇಳಲು ಬಾಯಿತೆಗೆಯುವನು)

ಶಾಮರಾವ್ : (ನಡುವೆ ಬಾಯಿಹಾಕಿ) ಅವನಿಗೆ ಗೊತ್ತಿದೆ, ನಿನಗೆ ಟೀನಲ್ಲಿ ಸಕ್ಕರೆ, ನಾಲ್ಕು ಚಮಚ ಅಂತ !
(ಇಬ್ಬರೂ ಮೆಲ್ಲನೆ ನಗುವರು. ಬಾಲು ಒಳಗೆ ಹೋಗುವನು)

ಶಾಮರಾವ್ : ಹಾಗಾದರೆ ನೀನು ಬಾವಿಗಿಳಿಯೋದನ್ನ ಎಲ್ಲಿ ಕಲಿತೆ ?

ಅಳಸಿಂಗರು : ಅದೊಂದು ಕಥೆ. ಬಾಲ್ಯದಲ್ಲಿ ನಾವಿದ್ದದ್ದು ಮೇಲುಕೋಟೇಲಿ. ನಮ್ಮ ಮನೆ ಹಿತ್ತಲಲ್ಲಿ ಒಂದು ಬಾವಿ ಇರೋದು. ಮನೇಲಿ ಒಂದಃ ಪಾಟಿ, ನಮ್ಮ ತೀರ್ಥರೂಪರ ಮುತ್ತಜ್ಜಿ. ವಯಸ್ಸು ಏನು, ತೊಂಬತ್ತು ಇರಬೇಕು. ಕಣ್ಣುಗಳೋ ಕಲ್ಲುಕುರುಡು, ನಿನಗೆ ಗೊತ್ತಲ್ಲ, ನಾವು ಅಯ್ಯಂಗಾರ್ರಲ್ಲಿ ಸ್ವಲ್ಪ ಮಡಿ ಜಾಸ್ತಿ. ಪಾಟೀಗೋ, ಬಾವಿನೀರೇ ಆಗಬೇಕು. ಅದನ್ನ ತನ್ನ ಕೈಯಿಂದಲೇ ಸೇದುಕೋಬೇಕು. ಇಷ್ಟಾದರೂ ಒಂದು ಸಲವಾದರೂ ಕುಣಿಕೇನ ಭದ್ರವಾಗಿ ಬಿಗಿದದ್ದೇ ಇಲ್ಲ. ಹಗ್ಗ ಇಳಿಬಿಟ್ಟರೆ ಸಾಕು, ಬಿಂದಿಗೆ ದುಡುಂ ಅಂತ ಬಾವೀಗೆ ಮಗಚಿಕೊಳ್ಳೋದು. ಎಷ್ಟು 'ಬೇಡ' ಅಂತ ಹೇಳಿದರೂ ಕೇಳ್ತಿರಲಿಲ್ಲ. ಊಟತಿಂಡಿ ಬಿಟ್ಟು ಬಾವಿ ಕಟ್ಟೆಯ ಹತ್ತಿರ ಅಳತಾ ಕುಳಿತುಬಿಡೋದು. ಈ ಊರಲ್ಲಿ 'ಗಂಗ' ಇರೋ ಹಾಗೆ ಮೇಲುಕೋಟೇಲೂ ಒಬ್ಬ 'ಮಂಗ' ಇರೋವ. ಮೊದಮೊದಲು ಅವನನ್ನ ಕರೆದು ತೆಗೆಸೋವು. ಆದರೆ ದಿನಕ್ಕೆ ಎಷ್ಟು ಸಲ ಅಂತ ?
ಕೊನೇಗೆ ಪಾಟೀ ಕಷ್ಟ ನೋಡಲಾರದೆ ಒಂದು ದಿನ ನಾನೇ ಧೈರ್ಯಮಾಡಿ ಬಾವೀಗೆ ಇಳಿಯೋದು ಕಲಿತೆ.

ಶಾಮರಾವ್ : ನೀನೇ ಖುದ್ದಾಗಿ ಕಲಿತೆಯಾ ?
(ಟೀ ಬರುವುದು. ಇಬ್ಬರೂ ಕುಡಿಯತೊಡಗುವರು.)

ಅಳಸಿಂಗರು : ಪ್ರಯತ್ನಿಸಿದರೆ ಯಾವುದು ಆಗೋಲ್ಲ, ಶಾಮಿ ?

ಮೊದಮೊದಲು ಸ್ವಲ್ಪ ಕಷ್ಟವಾಯಿತು. ಆಮೇಲೆ ದಿನಕ್ಕೊಂದು ಸಲ, ಎರಡು ಸಲ ಇಳಿಯೋವೆ. ಬರಬರತಾ ಬಾವಿ ನನಗೆ ಎರಡನೆಯ ಮನೆಯೇ ಆಗಿ ಬಿಡ್ತು...ನಾನಿನ್ನೂ ಹುಡುಗ. ನಮ್ಮದು ಸಣ್ಣ ಮನೆ. ಗೋಕುಲಾಷ್ಟಮಿ ದಿನ ತಿಂಡಿ ಮಾಡಿದಾಗ ಕದ್ದು ತಿನ್ನೋದಕ್ಕೆ ಒಂದು ಸರಿಯಾದ ಸ್ಥಳ ಇರ್ತಿರಲಿಲ್ಲ. ತಿಂಡೀನ ಸೊಂಟಕ್ಕೆ ಕಟ್ಟಿ, 'ಪಾಟೀ ಬಾವಿಗೆ ಬಿಂದಿಗೆ ಬಿತ್ತೆ ?' ಅಂತ ಇಳಿದು ಹೊರಟುಬಿಡೋವೆ. ಅಲ್ಲಿಯೇ ಗಂಟೆಗಟ್ಟಲೆ ಆರಾಮವಾಗಿ ಕೂತುಬಿಡೋವೆ.

ಶಾಮರಾವ್ : (ಸ್ಪಷ್ಟವಾದ ಶಂಕೆಯ ಧ್ವನಿಯಲ್ಲಿ) ಕೂತು ಬಿಡೋವೆ ? ಬಾವೀಲಿ ?

ಆಳಸಿಂಗರು : (ಸಿಕ್ಕಿಬಿದ್ದವನು ನುಣಚಿಕೊಳ್ಳುವಂತೆ, ಹೌದು. ಆಹಾ, ಬೇಸಿಗೇಲಿ ಅಲ್ಲಿ ಏನು ತಂಪು ಅಂತೀಯೆ ? ಸುತ್ತಾ ನಾಲ್ಕೂ ಕಡೆಯಿಂದ ತೂತಿನಲ್ಲಿ ಜುಳು ಜುಳು ಅಂತ ಬಾವೀಗೆ ನೀರು ಬಂದು ಬೀಳೋದನ್ನ ಕೇಳೋಕ್ಕೆ ಎಷ್ಟು ಸೊಗಸು ! ಇನ್ನು ಆ ಪಾಚಿಯ ಬಣ್ಣವೊ ? ಪಚ್ಚೆ ! ಪಚ್ಚೆ ! ಅದೇ ಒಂದು ಅದ್ಭುತಲೋಕ ! ನೀನು ಹ್ಞೂ ಅನ್ನು. ನಿನಗೂ ಬಾವಿಗಿಳಿಯೋದನ್ನು ಕಲಿಸಿಕೊಟ್ಟು ಬಿಟ್ಟೇನು.

ಶಾಮರಾವ್ : (ನಗುತ್ತ) ಸಾಕು, ಮಹರಾಯ ! ನೀನು ಕಲಿತರೇನು ? ನಾನು ಕಲಿತರೇನು ? ಎರಡೂ ಒಂದೇ ಅಲ್ಲವೆ ?

ಆಳಸಿಂಗರು : ಸರಿ, ಏಳು ಹಾಗಾದರೆ.

(ಇಬ್ಬರೂ ಎದ್ದು ಬಾವಿಯ ಕಡೆಗೆ ನಡೆಯುವರು)

ಶಾಮರಾವ್ : ನಿನಗೆ ಬಾವೀಗೆ ಇಳಿಯೋಕ್ಕೆ ಸಾಮಾನು, ಸರಂಜಾಮು ಏನೇನು ಆಗಬೇಕು ?

ಆಳಸಿಂಗರು ಏನು ಸಾಮಾನು, ಸರಂಜಾಮು ? ತಲೆ ನೆಟ್ಟಗಿರಬೇಕು, ಕೈಕಾಲು ಭದ್ರವಾಗಿರಬೇಕು, ಗುಂಡಿಗೆ ಗಟ್ಟಿಯಾಗಿರ

ಬೇಕು !

ಶಾಮರಾವ್ : ಅಲ್ಲವೊ, ಈ ಉಟ್ಟ ಪಂಚೇಲೇ ಇಳೀತೀಯಾ ?

ಅಳಸಿಂಗರು : ಯಾಕೆ ? ಒಳಗಡೆ ಇದೆಯಲ್ಲ, ಹನುಮಂತ ದೇವರ ವಜ್ರಕವಚ....

ಶಾಮರಾವ್ : (ಧ್ವನಿ ತಗ್ಗಿಸಿ) ಎಲ್ಲಾದರೂ ಉಂಟೆ ? ಮಕ್ಕಳುಮರಿ ಓಡಾಡೋ ಜಾಗ ! ತಾಳು, ನಿನಗೊಂದು ತುಂಡು ತರಿಸಿ ಕೊಡ್ತೀನಿ...ಹೋಗೊ, ಬಾಲೂ, ಅಜ್ಜೀನ ಕೇಳಿ ಇವನಿಗೊಂದು ಹಳೆಪಂಚೆ ತಂದುಕೊಡೊ. (ಬಾಲು ಒಳ ಹೋಗುವನು.) ಅಂದಹಾಗೆ, ಅಳಶಿಂಗ್ರು, ಒಂದು ಪ್ರಶ್ನೆ—ಆ ಸತ್ತ ಬೆಕ್ಕನ್ನ ಮೇಲೆತ್ತಿದ ಮೇಲೆ ಅದರ ವಿಲೇವಾರಿ ಹೇಗೆ ?

ಅಳಸಿಂಗರು : ನಿನಗೆ ಯಾಕೊ ಪ್ರತಿಯೊಂದೂ ಒಂದು ದೊಡ್ಡ ಸಮಸ್ಯೆಯಾಗಿ ಬಿಡುತ್ತೆ ಕಣಯ್ಯಾ, ಶಾಮಿ. ಊರಿನಲ್ಲಿ ಯಾವ ಬೆಕ್ಕೂ ನಾಯಿಯೂ ಸಾಯೋದೆ ಇಲ್ಲವೆ ? ಇಷ್ಟು ದೊಡ್ಡ ಕಾಂಪೌಂಡು ಇದೆ. ಎಲ್ಲಾದರೂ ಒಂದು ಮೂಲೇಲಿ ಬಿದ್ದಿರುತ್ತೆ. ನಾಳೆ ಬೆಳಗ್ಗೆ ಬೀದಿಗುಡಿಸೋನ ಕೈಗೆ ಒಂದು ನಾಲ್ಕಾಣೆ ಹಾಕಿದರಾಯಿತು. ಎತ್ತಿಕೊಂಡು ಹೋಗ್ತಾನೆ.

(ಬಾಲು ಒಂದು ತುಂಡು ಪಂಚೆಯನ್ನು ತಂದು ಕೊಡುತ್ತಾನೆ. ಅಳಸಿಂಗರು ರಂಗದ ಮೇಲೆಯೇ ಉಟ್ಟ ಪಂಚೆಯನ್ನು ಬಿಚ್ಚಿ ಅದನ್ನು ಉಡಲು ಹೋಗುತ್ತಾನೆ.)

ಶಾಮರಾವ್ : ಊಹ್ಞೂ, ಹಾದಿಬೀದೀಲಿ ಹೋಗೋರಿಗೆ ಕಾಣೋಹಾಗೆ ಇಲ್ಲಲ್ಲ...ಅಲ್ಲಿ...ಆ ಮರದ ಮರೇಲಿ.

ಅಳಸಿಂಗರು : ನೀನು ಹೀಗೆ ಬಿಗುಮಾನಕ್ಕೆ ಅಂಟಿಕೊಂಡು ಕೂತಿರೋ ವರೆಗೂ ಸಮಸ್ಯೆಗಳನ್ನ ಎದುರಿಸೋದಕ್ಕೆ ಆಗೋದಿಲ್ಲ, ಶಾಮಿ.

(ಎಂದು ನಗುತ್ತ ಮರದ ಮರೆಗೆ ಹೋಗುವನು)

ಶಾಮರಾವ್ : (ಕೊಂಚ ತಡೆದು) ಹಾಗೇ ಯೋಚಿಸ್ತಿದ್ದೆ, ನಾಳೆ ತನಕ ಆ ಸತ್ತ ಬೆಕ್ಕನ್ನ ಮನೇಲಿಟ್ಟುಕೊಂಡಿರೋದರ ಬದಲು ಬೆಳಿಗ್ಗೆಯೇ ತೆಗೆಸಿದರೆ ಹೇಗೆ ಅಂತ ?

ಅಳಸಿಂಗರು : (ಚಿಂತೆಯಿಂದ) ಇದೇನಿದು ? ನಿನಗೆ ಬಾವಿಗಿಳಿಯೋದನ್ನ ತೋರಿಸಿ, ಬಾಜಿ ಗೆದ್ದುಕೊಂಡು ಹೋಗಬೇಕು ಅಂತ ಎಲ್ಲ ಸಿದ್ಧತೆ ಮಾಡಿಕೊಂಡ ಮೇಲೆ, ಹೀಗೆ ಹಿಂದೇಟು ಹೊಡೆದರೆ ಹೇಗೆ ? (ಕೊಂಚ ಯೋಚಿಸಿ) ನಿನಗೆ ಬೆಕ್ಕಿನ ವಿಲೇವಾರೀದು ತಾನೇಪ್ಪ ಚಿಂತೆ ? ಅದನ್ನ ನನಗೆ ಬಿಡು. ಗುದ್ದಲಿ ಎಲ್ಲಿದೆ, ಹೇಳು ? ಅಲ್ಲಿ ಆ ಒಗೆಯುವ ಕಲ್ಲಾಚೆ, ಕರಿಬೇವಿನ ಗಿಡದ ಹತ್ತಿರ ಒಂದು ಗುಣಿ ತೋಡಿ, ಅದನ್ನ ಹೂತು, ಮಣ್ಣುಮುಚ್ಚಿ, ಹಾಲು ತುಪ್ಪ ಮಾಡಿ ಹೋಗ್ತೀನಿ. ಬೇಕೂ ಅಂದರೆ ನಾಲ್ಕು ಮಂತ್ರವನ್ನೂ ಹೇಳಿ, ಸಾಂಗೋಪಾಂಗವಾಗಿಯೇ ಮಾಡೋಣಂತೆ. ಇದುವರೆಗೆ ಈ ಜಗತ್ತಿನಲ್ಲಿ ಹುಟ್ಟಿದ ಯಾವ ಬೆಕ್ಕಿಗೂ ಅಂಥ ಸಂಸ್ಕಾರ ಆಗಿರಬಾರದು !

ವೆಂಕಮ್ಮ : ನೀವು ಬೇರೆ ಎಲ್ಲಿ ಏನು ಬೇಕಾದರೂ ಮಾಡಿಕೊಳ್ಳೀಪ್ಪ. ಆ ಕರಿಬೇವಿನ ಗಿಡದ ತಂಟೀಗೆ ಮಾತ್ರ ಹೋಗಬೇಡಿ. (ಅಳಸಿಂಗರು ಮಾತಾಡುತ್ತ ಆಡುತ್ತ ಬಾವಿಯ ಹತ್ತಿರ ಬಂದು ಬಗ್ಗಿ ನೋಡುತ್ತಾನೆ. ಅವನು ಕುರ್ಚಿ ಬಿಟ್ಟು ಎದ್ದಾಗಿನಿಂದ ಅವನ ಚೀಲ ಅವನ ಕೈಯಲ್ಲಿಯೇ ಇದೆ. ಪಂಚೆ ಬದಲಾಯಿಸುವಾಗಷ್ಟೇ ಅದನ್ನು ಕೆಳಗಿಟ್ಟು ಮತ್ತೆ ಎತ್ತಿಕೊಂಡಿದ್ದಾನೆ.)

ಶಾಮರಾವ್ : ಅಲ್ಲವೊ ? ಆ ಚೀಲದಲ್ಲಿ ಏನು ಆಸ್ತಿ ಇದೆ ಅಂತ ಜತೆ–ಜತೇಲಿ ಹೊತ್ತುಕೊಂಡು ಓಡಾಡಿಸ್ತಿದಿ ? ಅಲ್ಲಿ ಮೇಜಿನ ಮೇಲಿಟ್ಟು ಬರಬಾರದಾಗಿತ್ತೆ ?

ಅಳಸಿಂಗರು : ಇಲ್ಲ, ಬೇಡ. ನಾನು ಹೇಳ್ತೀನಿ, ಇದು ನಿನ್ನ ಕೈಯಲ್ಲಿರಲಿ. (ಚೀಲವನ್ನು ಶಾಮರಾಯನ ಕೈಗೆ ಕೊಟ್ಟು, ಬಗ್ಗಿ

ಬಾವಿಯ ತಳವನ್ನೇ ನೋಡುತ್ತ, ಕೊಂಚ ಭಯದ ಧ್ವನಿಯಲ್ಲಿ) ಶಾಮಿ, ಬಾವಿ ಏನೋ ಬರಿ ೨೦–೨೫ ಅಡಿ ಆಳ ಇದೆ ಅಂದೆ. ಇದನ್ನ ನೋಡಿದರೆ ೫೦ ಕ್ಕೆ ಕಡಿಮೆ ಇದ್ದ ಹಾಗಿಲ್ಲ. ಮೇಲೆ, ಇಕ್ಕಟ್ಟಾಗಿ ಕತ್ತಲು ಕವಚಿಕೊಂಡಿದೆ.

ಶಾಮರಾವ್ : ಯಾಕೆ, ಕಾಲು ನಡುಗ್ತಿರೋ ಹಾಗಿದೆಯಲ್ಲ. ಏನು, ಮತ್ತೆ ಮೇಲೆ ಬರೋದು ಅನುಮಾನವೋ ಹೇಗೆ ?

ಅಳಸಿಂಗರು : ಛೆ, ಅಪಶಕುನ ! ಬಿಡುತು ಅನ್ನು.

(ಅಳಸಿಂಗರು ಬಾವಿಯ ಕಟ್ಟೆಯ ಮುಂದೆ ಕೈಮುಗಿದು ನಿಂತು, ದ್ವಾದಶಪಂಜರ ಸ್ತೋತ್ರದ ಈ ಕೊನೆಯ ಎರಡು ಶ್ಲೋಕಗಳನ್ನಷ್ಟೇ ಜೋರಾಗಿ ಹೇಳುತ್ತಾನೆ)

ಓಂ ಆಪದಾಮ್ ಅಪಹರ್ತಾರಂ
ದಾತಾರಂ ಸರ್ವಸಂಪದಾಮ್ ।
ಲೋಕಾಭಿರಾಮಮ್ ಶ್ರೀರಾಮಂ
ಭೂಯೋಭೂಯೋ ನಮಾಮ್ಯಾಹಮ್ ॥
ಆರ್ತಾನಾಮ್ ಆರ್ತಿಹಂತಾರಂ
ಭೀತಾನಾಮ್ ಭೀತಿನಾಶನಮ್ ।
ದ್ವಿಷತಾಮ್ ಕಾಲದಂಡಂ ತಂ
ರಾಮಚಂದ್ರಂ ನಮಾಮ್ಯಹಮ್ ॥

(ಬಾವಿಯನ್ನು ಮುಟ್ಟಿ ಕಣ್ಣಿಗೊತ್ತಿಕೊಂಡು, ಕೆನ್ನೆ ಬಡಿದುಕೊಳ್ಳುವನು. ಆಮೇಲೆ ಅಂಗಿ ಬಿಚ್ಚಿ, ಉಟ್ಟ ತುಂಡನ್ನೆತ್ತಿ ಕಚ್ಚೆ ಬಿಗಿದು, ಜುಟ್ಟು ಕಟ್ಟುವನು. ಹಗ್ಗದ ತುದಿಗೆ ಕಟ್ಟಿರುವ ಬುಟ್ಟಿಯನ್ನು ಬಿಚ್ಚಿ, 'ಬಾಲು, ಈ ಬುಟ್ಟಿ ಬೇಡ. ಬಕೆಟ್ಟೇ ವಾಸಿ' ಎಂದು ಹೇಳಿ ಬಕೆಟನ್ನು ತರಿಸಿ, ಹಗ್ಗದ ತುದಿಗೆ ಕಟ್ಟುವನು. ಆಮೇಲೆ, 'ಶ್ರೀರಂಗನಾಥ...ಶೇಷಶಯನ' ಎನ್ನುತ್ತ ಕಷ್ಟದಿಂದ ಬಾವಿಕಟ್ಟೆಯ ಮೇಲೆ ಹತ್ತಿ, ಹಗ್ಗದ ಇನ್ನೊಂದು ತುದಿಯನ್ನು ಬಾವಿಯ ಮೇಲಿನ ಅಡ್ಡ ತೊಲೆಗೆ ಬಿಗಿದು

ಕಟ್ಟುವನು. ಅವನ ಕಾಲು ನಡುಗುತ್ತಿದೆ. ಮುಖದಲ್ಲಿ ಕುಂಟುಗಾಲಿಗೆ ಶ್ರಮವಾದ ಕಾರಣ ಕೊಂಚ ಯಾತನೆ ಎದ್ದು ಕಾಣುತ್ತಿದೆ. ಅದೇ ಹೊತ್ತಿಗೆ ಸತ್ಯನೂ ಅಲ್ಲಿಗೆ ಬರುವನು.)

ಸತ್ಯ : ಎಂಕಮ್ಮನೋರೆ, ಪಾತಾಳಗರಡಿ ಎಲ್ಲೂ ಸಿಗಲಿಲ್ಲ.

ಅಳಸಿಂಗರು : ಹಾಗಾದರೆ ಇದು ನಿಜವಾದ ಬಾಜಿ ತಾನೆ, ಶಾಮಿ ? ಹುಡುಗಾಟ ಅಲ್ಲವಲ್ಲ. ಇಳಿದರೆ ಇಪ್ಪತ್ತು ರೂಪಾಯಿ ಖಂಡಿತ ತಾನೆ ?

ಶಾಮರಾವ್ : ಬರೀ ಇಳಿದರೆ ಅಲ್ಲ. ಇಳಿದು ಬೆಕ್ಕು ಎತ್ತಿಹಾಕಬೇಕು.

ಅಳಸಿಂಗರು : ಅದೇಯೇ. ಒಂದು ಪಕ್ಷ ನನಗೇನಾದರೂ ಆದರೆ... ಆಗೋಲ್ಲ....ಆದರೂ ಆದರೆ...ನಾವು ಲಾಯರುಗಳು ಹೇಳುವ ಹಾಗೆ, **heirs and assignees** ಗೆ ಹಣ ಸಂದಾಯವಾಗುತ್ತೆ, ತಾನೆ ? ನನಗಿರುವ ವಾರಸು ದಾರರು ಅಂದರೆ ಇಬ್ಬರೇ—ಒಬ್ಬ ಮಗಳು, ಒಬ್ಬ ಮೊಮ್ಮಗ...ಈ ಸತ್ಯ ಒಳ್ಳೆಯ ಸಮಯಕ್ಕೆ ಬಂದ. ನೋಡು, ಸತ್ಯ. ಹಗ್ಗದ ಮೇಲೆ ಒಂದು ಕೈಯಿರಲಿ. ಒಂದೊಂದು ಸಲ ಭಾರಕ್ಕೆ ಕುಣಿಕೆ ಬಿಚ್ಚಿಕೊಳ್ಳೋ ದುಂಟು... ಬಾಲು, ನೀನು ಕುಣಿಕೆಯ ಮೇಲೆ ಕಣ್ಣಿಟ್ಟಿರು. ಅದು ಸಡಿಲವಾದರೆ ಸತ್ಯನಿಗೆ ಎಚ್ಚರಿಕೆ ಕೊಡು.

(ಅಳಸಿಂಗರು ಹಗ್ಗ ಹಿಡಿದು ನಿಧಾನವಾಗಿ ಬಾವಿಗೆ ಇಳಿಯುವನು. ಎಲ್ಲರೂ ಸುತ್ತ ನೋಡುತ್ತ ನಿಲ್ಲುತ್ತಾರೆ.)

ಅಳಸಿಂಗರು : (ಬಾವಿಯ ಒಳಗಿನಿಂದ) ಸತ್ಯ...ಬಾಲು...ಹಗ್ಗ ಭದ್ರ.

ಸತ್ಯ : ನೀವು ಆ ಯೋಚನೆ ಬಿಡಿ, ವಾಧ್ಯಾರ್ರರೆ....ಇಳೀರಿ. (ಕೊಂಚ ಹೊತ್ತು ಬಿಟ್ಟು ಒಳಗಿಂದ 'ದಪ್' ಎಂದು ಶಬ್ದ)

ಬಾಲು : ಅದೇನೋ ಶಬ್ದವಾಯಿತು...ಎಲ್ಲೋ ತಾಗಿತು ಅಂತ

ಕಾಣುತ್ತೆ.

ಶಾಮರಾವ್ : (ಬಗ್ಗಿ ನೋಡುತ್ತ) ಏನು...ಏನಾಯಿತು ಆಳಸಿಂಗ್ರು?
...ಎಲ್ಲಾ ಸರಿಯಾಗಿದೆ ತಾನೆ ?
(ಬಾವಿಯಿಂದ ಉತ್ತರವಿಲ್ಲ. ಶಾಮರಾವ್ ಗಾಬರಿಯಾಗಿ, ಆತಂಕದಿಂದ ಜೋರಾಗಿ 'ಅಳಶಿಂಗ್ರೂ' ಎಂದು ಕೂಗುವನು. ಅದಕ್ಕೂ ಉತ್ತರವಿಲ್ಲ. ಎಲ್ಲರೂ ಪರಸ್ಪರ ಮುಖ ನೋಡಿಕೊಳ್ಳುವರು.)

ವೆಂಕಮ್ಮ : (ಮೆಲ್ಲಗೆ) ಅಳಶಿಂಗ್ರೂಗೆ ಒಂದು ಕಾಲು ಸರಿಯಿಲ್ಲ ಅಂತ ತಿಳಿದೂ ತಿಳಿದೂ ಅವನನ್ನ ಬಾವೀಗೆ ಇಳಿಯೋದಕ್ಕೆ ಬಿಟ್ಟದ್ದು ತಪ್ಪಾಯಿತು ಅನ್ನಿಸುತ್ತೆ ಕಣೋ, ಮಗು.

ಶಾಮರಾವ್ : (ಅಷ್ಟೇ ಆತಂಕದಿಂದ) ಏನಾಗುತ್ತೊ ಏನೊ ? ದೇವರೇ ಗತಿ ! ನಮ್ಮ ಸಂಕಟ ಪರಿಸ್ಥಿತಿ, ಅವನ.. ತೋರಿಸಿದ ಹುಚ್ಚು ಉತ್ಸಾಹ ಎರಡೂ ಸೇರಿ ಅವನನ್ನ ಬಾವೀಗೆ ಇಳಿಯೋಕ್ಕೆ ಬಿಟ್ಟೆ...ನನಗೂ ಭಯವಾಗ್ತಿದೆ... (ಜೋರಾಗಿ) ಅಳಶಿಂಗ್ರೂ, ಏನಾಯ್ತು ಅಳಶಿಂಗ್ರೂ ?
...ಜವಾಬು ಯಾಕೆ ಕೊಡ್ತಿಲ್ಲ ?

ಅಳಸಿಂಗರು : (ಕೆಲವು ಕ್ಷಣ ಬಿಟ್ಟು, ಒಳಗಿನಿಂದ) ಏನಿಲ್ಲ, ಗೂಡು ಹೆಜ್ಜೇಗೆ ಸಿಗದೆ ಕೊಂಚ ಕಾಲು ಜಾರಿತು, ಅಷ್ಟೆ...ಎಲ್ಲ ಸರಿಯಾಗಿದೆ...ನೀವು ಏನೂ ಯೋಚನೆ ಮಾಡಬೇಡಿ.

ವೆಂಕಮ್ಮ
ಶಾಮರಾವ್ : (ಒಟ್ಟಿಗೆ) ಅಬ್ಬಾ !

ಬಾಲು : ತುಂಬ ಕಷ್ಟ ಪಡ್ತಿದಾರೆ ಅಂತ ಕಾಣುತ್ತೆ.

ಸತ್ಯ : ನೋಡಿ, ಹೇಗೆ ಏದುಸಿರು ಕೇಳಸ್ತಿದೆ.
(ಕೆಲವು ಕ್ಷಣ ಬಿಟ್ಟು)

ಬಾಲು : ತಳ ಮುಟ್ಟಿದರು ಅಂತ ಕಾಣುತ್ತೆ ನೀರು ಜೋರಾಗಿ ಅಲ್ಲಾಡ್ತಿರೋದು ಕಾಣಿಸುತ್ತೆ.

ಅಳಸಿಂಗರು : (ಒಳಗಿನಿಂದ) ಶಾಮಿ, ಕೆಲಸವಾಯಿತು...ನೀವು ಯೋಚನೆ ಮಾಡಬೇಡಿ.

ಸತ್ಯ : ಹಗ್ಗ ಜಗ್ಗತಾ ಇದೆ...ಮೇಲೆ ಬರ್‍ತಿರೋ ಹಾಗಿದೆ. (ಕೊಂಚ ಹೊತ್ತಿನ ಮೇಲೆ, ಮೈಯೆಲ್ಲ ಒದ್ದೆಯಾಗಿ, ಪಾಚಿ ಮೆತ್ತಿಕೊಂಡು ವಿಕರಾಳವಾಗಿ ಕಾಣುವ ಅಳಸಿಂಗರು ಬಾವಿಯ ಮೇಲೆ ಹಗ್ಗಕ್ಕೆ ಜೋತುಬಿದ್ದು ಕಾಣಿಸಿಕೊಳ್ಳುತ್ತಾನೆ. ಕಷ್ಟದಿಂದ ಕಟ್ಟೆಯ ಮೇಲೆ ಕಾಲಿಟ್ಟು ಕೆಳಗಿಳಿಯುತ್ತಾನೆ. ಮೈ ನಡುಗುತ್ತಿದೆ, ಏದುಸಿರು ಬಿಡುತ್ತಿದ್ದಾನೆ. ಕೆಲವು ಕ್ಷಣ ಮಾತಾಡದೆ ತಲೆಯ ಮೇಲೆ ಕೈಹೊತ್ತು ಕೂತುಬಿಡುತ್ತಾನೆ. ಸನ್ನಿವೇಶ ಉದ್ವಿಗ್ನತೆಯಿಂದ ಕೂಡಿದೆ)

ಅಳಸಿಂಗರು : (ಇದ್ದಕ್ಕಿದ್ದಂತೆ ಮೈ ಜಾಡಿಸಿಕೊಂಡು ಎದ್ದು ಪ್ರಯತ್ನ ಪೂರ್ವಕವಾಗಿ ನಗುತ್ತ) ಎಲ್ಲ ಸಲೀಸಾಗಿ ಆಯಿತು... ಏನೂ ಕಷ್ಟವಾಗಲಿಲ್ಲ...ಎಲ್ಲ ಅವನ ದಯೆ !... ಶ್ರೀರಂಗನಾಥ !.... ಶೇಷಶಯನ !... (ನಗುತ್ತ) ನಿಮ್ಮ ಬೆಕ್ಕನ್ನ ಎತ್ತಿ ಬಕೆಟ್ಟಿಗೆ ಹಾಕಿಟ್ಟಿದೀನಿ...ಈಗ ಎಳೆದು ಕೊಡ್ತೀನಿ. (ಕೈಯಿಂದ, ಮೈಗೆ ಅಂಟಿದ ಕಸವನ್ನು ಒರೆಸಿಹಾಕುತ್ತ) ಅಲ್ಲ, ಶಾಮರಾವ್, ನಿಮ್ಮದು ಎಂಥ ಬಾವಿ ಅಂತೀರಿ ? ನರಕ...ಸಾಕ್ಷಾತ್ ನರಕ ! ಏನು ಕತ್ತಲು, ಏನು ಗಬ್ಬು ! ಆ ಪಾಚಿಯೊ, ಆ ಜಾರೊ ! (ಸನ್ನಿವೇಶದ ಉದ್ವಿಗ್ನತೆಯನ್ನು ಇಳಿಸಲು ಬೇಕೆಂದೇ ಹಾಸ್ಯಮಾಡುತ್ತ) ನನಗೇನಾದರೂ ಅಧಿಕಾರ ಇದ್ದಿದ್ದಿ ದ್ದರೆ, ಒಂದು 'ವೆಲ್'-ಫೇರ್ ಡಿಪಾರ್ಟ್‌ಮೆಂಟ್ ತೆಗೆದು ಇಂಥ ಬಾವಿಗಳನ್ನೆಲ್ಲಾ ತಕ್ಷಣ ಮುಚ್ಚಿಸಬೇಕು ಅಂತ ಡಂಗುರ ಹೊಡೆಸಿಸಿಬಿಡ್ತಿದ್ದೆ (ನಗುತ್ತಾನೆ).

ಬಾಲು : (ಅವನ ಕಾಲಿನ ಕಡೆ ನೋಡುತ್ತ, ಗಾಬರಿಯಿಂದ) ಅಯ್ಯೋ, ಅಣ್ಣ, ಇಲ್ಲಿ ನೋಡಿ. ಇವರ ಕಾಲಿನಿಂದ ಹೇಗೆ

ರಕ್ತ ಸೋರ್‍ತಿದೆ !

ಸತ್ಯ : ಬೆನ್ನು ಸಹ ತರಿದು ಗಾಯವಾಗಿದೆ !

ಅಳಸಿಂಗರು : ಇಲ್ಲ, ಬಿಡ್ರೋ. ಎಲ್ಲೋ ಸ್ವಲ್ಪ ತಾಗಿ, ತರೀತು ಅಂತ ಕಾಣುತ್ತೆ. ಅದಕ್ಕೆ ಎಷ್ಟು ಆರ್ಭಟ ಮಾಡ್ತೀರಿ. ಹೇಳಿದೆನಲ್ಲ, ನನ್ನ ದೇಹಕ್ಕೆ ಬಾವಿ ಸ್ವಲ್ಪ ಇಕ್ಕಟ್ಟು ಅಂತ ! (ಮತ್ತೆ ನಗುವನು) ಬನ್ನಿ. ಬೆಕ್ಕತ್ತೋಣ. ನೋಡುವಿರಂತೆ, ಅದು ಹೇಗಿದೆ ಅಂತ.

ವೆಂಕಮ್ಮ : ಏನಪ್ಪ ಅಳಶಿಂಗ್ರು, ಹೀಗೆ ಗಾಯಮಾಡಿಕೊಳ್ಳೋಣ ಅಂದ್ರೇನು ? ಮೊದಲು ರಕ್ತ ಒರೆಸಿಕೊಂಡು ಕೊಂಚ ಮುಲಾಮು ಹಚ್ಚಿಕೊ. ಆಮೇಲೆ ಉಳಿದದ್ದಾಗುತ್ತೆ.

ಅಳಸಿಂಗರು : ಅಯ್ಯೋ, ಬಿಡಿ ತಾಯಿ. ಅದೂ ಒಂದು ಗಾಯವೆ ? (ಹುಡುಗರಿಗೆ) ಯಾಕ್ರೊ, ನಿಂತುಬಿಟ್ಟಿರಿ ? ಬನ್ನಿ. (ಅಳಸಿಂಗರು ಹಗ್ಗವನ್ನು ಮಾರುಮಾರಾಗಿ ಎಳೆದು, ಬಕೆಟ್ಟನ್ನು ಮೇಲೆತ್ತುತ್ತಾನೆ.)

ವೆಂಕಮ್ಮ : ನಡೀರಿ, ನೀವು ಹುಡುಗರೆಲ್ಲರೂ ಒಳಗೆ ಹೋಗೀಪ್ಪ. ಅಸಹ್ಯ, ಅದನ್ನೇನು ನೋಡೋದು.

ಶಾಮರಾವ್ : ನೋಡು, ಅಳಶಿಂಗ್ರು, ಸತ್ತು ನೀರಲ್ಲಿ ನೆಂದ ಬೆಕ್ಕನ್ನ ನಮಗೆ ತೋರಿಸೋ ಅಗತ್ಯ ಏನಿದೆ ? ಮುಟ್ಟಿ ನಿನಗೆ ಮೈಲಿಗೆಯಾಗಿರೋದು ಸಾಲದು ಅಂತ, ನೋಡಿ ನಮಗೂ ಮೈಲಿಗೆ ಆಗಬೇಕೆ ? ಹೇಗಿದ್ದರೂ ಅದರ ವಿಲೇವಾರಿ ಇತ್ಯರ್ಥವಾಗಿದೆ. ನಮ್ಮ ಕಣ್ಣ ಹಿಂದೆ ಒಂದು ಗುಂಡಿ ತೋಡಿ, ಹೂತು ಮುಗಿಸಿ ಬಿಡು, ಬೇಗ.

ವೆಂಕಮ್ಮ : ತೋಡತಾ ತೋಡತಾ ಗುಂಡೀನ ಸ್ವಲ್ಪ ಆಳವಾಗಿಯೇ ತೋಡೋದು ವಾಸಿ, ಅಳಶಿಂಗ್ರು. ಮೇಲೆ ಮಣ್ಣನ್ನೂ ಕೊಂಚ ಒತ್ತಿ ಒತ್ತಿ ಹಾಕಬೇಕು. ರಾತ್ರಿ ಯಾವದಾದರೂ ನಾಯಿಯೋ ನರಿಯೋ ಗೋಡೆ ಹತ್ತಿ ಬಂದು, ಮಣ್ಣು ಬಗೆದಾತು,

ಸತ್ಯ : ಹೊತಾದ ಮೇಲೆ ಎಲ್ಲರೂ ಸೇರಿ ಒಂದು ಒಣಮರದ ಟೊಂಗೇನ ಮೇಲೆ ಎಳೆದು ಬಿಟ್ಟರಾಯಿತು, ಎಂಕಮ್ಮ ನೋರೆ.

ವೆಂಕಮ್ಮ : ಅದೂ ಸರಿಯೇ.

ಅಳಸಿಂಗರು : ತಾಳಿ, ತಾಳಿ. ಇಡೀ ದಿನ ನೀವೆಲ್ಲರೂ ಅಷ್ಟು ಬವಣೆ ಪಟ್ಟಿದೀರಿ. ಮೇಲೆ, ನೀನು ಇಪ್ಪತ್ತು ರೂಪಾಯಿ ಜುಲ್ಮಾನೆ ಬೇರೆ ಕೊಡ್ತಿದಿ. ಶಾಮಿ, ಅಂದ ಮೇಲೆ, ಒಂದು ಸಲ ಅದರ ದರ್ಶನವಾಗಿ ಬಿಡಲಿ—ಪ್ರಥಮ ಅಂತಿಮ ದರ್ಶನ ! ಏನು ದಿನಾ ಬರೋದೆ ಈ ಅವಕಾಶ ?

ಶಾಮರಾವ್ : ನೋಡು, ಅವೆಲ್ಲಾ ಬೇಡ.

ಅಳಸಿಂಗರು : ನಾವು ಲಾಯರುಗಳು ಹೇಳ್ತೀವಲ್ಲ, CORPUS DELICTI ಅಂತ—ಅಪರಾಧ ರುಜುವಾತಾಗಬೇಕಾದರೆ ಮುಖ್ಯವಾದ ಪ್ರಮಾಣ ಕಣ್ಣೆದುರಿಗೆ ಇರಬೇಕು... ನೋಡುವಿಯಂತೆ.

(ಅಳಸಿಂಗರು ಬಕೆಟ್ಟನ್ನೆತ್ತಿ ರಂಗದ ಮಧ್ಯೆ ಸುರಿಯುವನು)

ಶಾಮರಾವ್ : (ರೇಗಿ) ಲೋ ಅಯ್ಯಂಗಾರಿ, ಸಾಕು ನಿನ್ನ ಹುಡುಗಾಟ. ಅದೆಲ್ಲಾ ಬೇಡ ಅಂತ ಹೇಳಿದೆನಲ್ಲ.

(ರಂಗದ ಮೇಲೆ, ಹರಿಯುವ ನೀರಿನ ಮಧ್ಯೆ ಒಂದು ಕರಿಯ ಕುಪ್ಪೆ ಕಾಣಿಸುವುದು)

ವೆಂಕಮ್ಮ : ಇದೇನಿದು, ಬಾಲೂದು ಸ್ವೆಟರ್ರು !

(ಅಳಸಿಂಗರು ಗೊಳ್ಳನೆ ನಗುವನು)

ಶಾಮರಾವ್ : ಇದು ಯಾಕೊ ನೀನು ಆಡಿಸೋ ಕನ್ನಡ ಪ್ರಹಸನದ Climax ಇದ್ದ ಹಾಗೆ ಇದೆಯಲ್ಲ ! ಇದೆಲ್ಲಿತ್ತು ?... ಬೆಕ್ಕೆಲ್ಲೊ ? ಬೆಕ್ಕನ್ನ ತೆಗೀಲಿಲ್ಲವೆ ?

ಅಳಸಿಂಗರು : ಬೆಕ್ಕೆ ? ಅಲ್ಲಯ್ಯ ಶಾಮರಾವ್, ನೀನು ದೊಡ್ಡ ಕ್ರಿಮಿನಲ್ ಲಾಯರ್ರು. ಕೋರ್ಟಿನಲ್ಲಿ ಬುದ್ಧಿವಂತಿಕೆ ಯಿಂದ ವಾದಿಸಿ, ಕೊಂದವರನ್ನ ಜೈಲಿಂದ ಬಿಡಿಸಿ,

ಕೊಲ್ಲದವರನ್ನ ಜೈಲಿಗೆ ಕಳಿಸೋ ಅಷ್ಟು ಚತುರತೆ, ಚಾಕ ಚಕ್ಯತೆ ಇರುವವನು. ಕೊಂಚ ಯೋಚಿಸು. ಬೆಕ್ಕು ಎಲ್ಲಿಯಾದರೂ ತಾನೇ ತಾನಾಗಿ ಬಾವೀಗೆ ಬೀಳೋಣ ಅಂದರೇನು ? ಅದನ್ನು ಹೊರಗೆ ಯಾರಾದರೂ ಹೊಡೆದು, ಬಾವೀಗೆ ತಂದು ಹಾಕಿದರೆ ಬೇರೆ ಮಾತು.

ಶಾಮರಾವ್ : ಹಾಗಾದರೆ ಬಾವೀಲಿ ಬೆಕ್ಕಿರಲಿಲ್ಲವೆ ?

ಅಳಸಿಂಗರು : ನೀನು ಕೇಳಿಯೋ ಇದಿ—ಬೆಕ್ಕಿಗೆ ಒಂದಲ್ಲ, ಒಂಬತ್ತು ಜೀವ ಅಂತ. ಬದುಕೋದಕ್ಕೆ ಅಂತಲೇ ಹುಟ್ಟಿರೋ ಬೆಕ್ಕು ಅಷ್ಟು ಸುಲಭವಾಗಿ ಸಾಯೋದುಂಟೆ ? ಇನ್ನೇನು ಬಾವೀಗೆ ಮಗುಚಿಕೊಂಡಿತು, ಮುಗೀತು ಅದರ ಅವಸ್ಥೆ ಅನ್ನೋವಾಗ ಅದರ ಮೈಯಲ್ಲಿ ಮಿಂಚು ಮೂಡಿ ಬರುತ್ತೆ. ಹೇಗೋ ತನಗೇ ತಿಳೀದೇ ಚಂಗನೆ ಹಾರಿ ತಪ್ಪಿಸಿಕೊಳ್ಳುತ್ತೆ. ಅದು ಹೆಜ್ಜೆಹೆಜ್ಜೇಗೆ ಸಾವನ್ನ ಸತಾಯಿಸುತ್ತೆ, ಸಾವಿರ ಸಲ ಸತಾಯಿಸುತ್ತೆ. ಅದು ಅರ್ಥವಾಗೋದು ನನ್ನಂತಹವನಿಗೆ—ಸದಾ ಬದುಕಿನ ಬಾವಿಯ ಮೇಲೆ ಕೂತು, ಬೆಕ್ಕಿನ ಹಾಗೆ ಬಿದ್ರೂ ಬೀಳದಂತೆ ನಾಜೂಕ್ಕಾಗಿ ಬಾಳು ನಡಸಬೇಕಾಗಿ ಬಂದಿರೋನಿಗೆ.

ಶಾಮರಾವ್ : ಮತ್ತೆ ಬಾಲು ಹೇಳಿದ, ಬೆಕ್ಕು ಬಾವಿಗೆ ಬಿದ್ದದ್ದನ್ನ ಕಣ್ಣಾರೆ ನೋಡಿದೆ ಅಂತ.

ಅಳಸಿಂಗರು : (ರಂಗದ ಮೇಲೆಯೋ ಆಕಡೆ ತಿರುಗಿ ಒದ್ದೆಯ ತುಂಡನ್ನುಬಿಚ್ಚಿ, ತನ್ನ ಪಂಚೆ ಉಟ್ಟುಕೊಳ್ಳುತ್ತ) ಅವನು ಹುಡುಗ, ಹೇಳ್ತಾನೆ. ನೀವು ಕ್ರಿಮಿನಲ್ ಲಾಯರುಗಳು reconstructing the crime ಅಂತೀರಲ್ಲ, ಹಾಗೆ reconstruct ಮಾಡಿ ನೋಡಿಕೋ —ಬೆಳಗಿನ ಜಾವ. ಹುಡುಗ ಎದ್ದುಬಂದಿದಾನೆ. ನಿದ್ದೆಗಣ್ಣು. ಉಚ್ಚೇಗೆ ಅವಸರ. ಬಾವಿಯ ಅಂಚಿನಲ್ಲಿ

ಬೆಕ್ಕು ಕೂತಿದ್ದಿರಬಹುದು. ಪಾಪ, ಏನೋ ಅದರ ಹೊಟ್ಟೆ ಪಾಡು, ಹಲ್ಲೀಗೊ ಜಿರಳೇಗೊ ಹೊಂಚು ಹಾಕುತ್ತಿತ್ತೇನೊ. ಬಾಲು ಅದು ಆತ್ಮಹತ್ಯೆಗೆ ಸಿದ್ಧ ವಾಗಿ ಕೂತಿದೆ, ಓಡಿಸಿ ಉಳಿಸೋಣ ಅಂತ ಸುತ್ತ ನೋಡಿದಾನೆ. ಇನ್ನೇನೂ ಸಿಗಲಿಲ್ಲ. ತಂತಿಯ ಮೇಲೆ ಸ್ವೆಟರಿತ್ತು. ಅದು ತನ್ನದೇ ಸ್ವೆಟರ್ರು ಅನ್ನೋ ಪರಿಜ್ಞಾನವೂ ಇಲ್ಲದೆ ತೆಗೆದು ಬೆಕ್ಕಿನ ಕಡೆಗೆ ಎಸೆದ. ಬೆಕ್ಕು ಹಾರಿ ತಪ್ಪಿಸಿಕೊಂಡಿತು. ಸ್ವೆಟರ್ ಬಾವಿಗೆ ಬಿತ್ತು. ಧೊಪ್ ಅಂತ ಶಬ್ದವಾಯಿತು. ಬೆಕ್ಕೇ ಬಾವಿಗೆ ಬಿತ್ತು ಅಂದುಕೊಂಡ.

ಶಾಮರಾವ್ : ಹಾಗಾದರೆ ನಿನಗೆ ಮೊದಲೇ ಗೊತ್ತಿತ್ತೆ, ಬಾವೀಲಿ ಬೆಕ್ಕು ಬಿದ್ದು ಸತ್ತಿಲ್ಲ ಅಂತ ?

ಅಳಸಿಂಗರು : ವಿಷಯ ತಿಳಿದಾಗ ಅನುಮಾನ ಬಂತು—ಇಲ್ಲಿ ಏನೋ ತರ್ಕ ತಪ್ಪಿದೆ ಅಂತ. ಆದರೂ ಬಾವೀಲಿ ಬೆಕ್ಕು ಬಿದ್ದಿರಲಿ ಅಂತಾನೇ ದೇವರಿಗೆ ಹರಕೆ ಹಾಕಿಕೊಂಡು ಬಂದಿದ್ದೆ ಅಂತ ಇಟ್ಕೊಕೊ. ಇಲ್ಲಿ ಬಂದು ಬಾವೀಲಿ ಬಗ್ಗಿ ನೋಡಿದಾಗ ಅನುಮಾನ ಖಚಿತವಾಯಿತು.

ಶಾಮರಾವ್ : ಬಾವೀಲಿ ಬೆಕ್ಕು ಬಿದ್ದಿಲ್ಲ ಅಂತ ತಿಳಿದಿದ್ದೂ ನಮಗೆ ಹೇಳದೆ ಇದ್ದದ್ದು, ಮೇಲೆ ಬಾವೀಗೆ ಇಳಿದದ್ದು—ಏನು ಇದೆಲ್ಲಾ ಮಂಗಾಟ, ಅಳಶಿಂಗ್ರು ? ಈ ವಯಸ್ಸಿನಲ್ಲಿ ?

ಅಳಸಿಂಗರು : (ಹುಸಿನಗೆ ನಗುತ್ತ, ತರಾತುರಿಯಿಂದ) ಅದನ್ನೆಲ್ಲಾ ಕಟ್ಟಿಕೊಂಡು ಏನು ಮಾಡ್ತಿ ? ಈಗ ತೆಗಿ ಇಪ್ಪತ್ತು ರೂಪಾಯಿ. ಹೊತ್ತಾಯ್ತು, ನಾನು ಹೊರಡಬೇಕು.

ಶಾಮರಾವ್ : ಯಾವದು ಇಪ್ಪತ್ತು ರೂಪಾಯಿ ?

ಅಳಸಿಂಗರು : (ಗಾಬರಿಯಾಗಿ) ಏನು ಹೀಗಂತಿ, ಶಾಮರಾವ್ ?

ಶಾಮರಾವ್ : ಮತ್ತೇನು ? ಮಾಡೋದಕ್ಕೆ ಕಸುಬಿಲ್ಲದೆ ನೀನು ಇಲ್ಲಿ ಬಂದು ನಮ್ಮನ್ನ ಚುಡಾಯಿಸು. ಮೇಲೆ ದಕ್ಷಿಣೇಗೂ

ಏಟು ಹಾಕು, ಹೋಗು, ಹೋಗು.

ಅಳಸಿಂಗರು : (ಗೋಗರೆಯುತ್ತ) ಹಾಗೆ ಮಾಡಬೇಡ, ಶಾಮಿ. ಇದು ನ್ಯಾಯವಲ್ಲ; ಒಂದು ಸಲ ಮಾತಾದ ಮೇಲೆ ಅದನ್ನ ಉಳಿಸಿಕೋಬೇಕು.

ಶಾಮರಾವ್ : (ಲಾಯರಂತೆ ವಾದ ಹೂಡುತ್ತ) ಅಲ್ಲವೊ, ನೀನು ಬಾವೀಗಿಳಿದು ಬೆಕ್ಕು ತೆಗೆದು ಹಾಕೋದು, ನಾನು ಇಪ್ಪತ್ತು ರೂಪಾಯಿ ಕೊಡೋದು ಅಂತ ತಾನೇ ಕರಾರಾಗಿದ್ದದ್ದು. ಒಪ್ಪಿದೆ. ನೀನು ಬಾವೀಗಿಳಿದೆ, ಬೆಕ್ಕು ತೆಗೆದಿಲ್ಲ. ಅಂದರೆ, ಒಪ್ಪಿಕೊಂಡ ಕೆಲಸವನ್ನ ಮುಗಿಸಲಿಲ್ಲ. ಆದ್ದರಿಂದ ಸಂಭಾವನೆ ಕೊಡುವ ಪ್ರಮೇಯವೇ ಏಳೋಲ್ಲ.

ಅಳಸಿಂಗರು : ಅಲ್ಲಿ ಇಲ್ಲದೇ ಇರೋ ಬೆಕ್ಕನ್ನ ನಾನು ಎಲ್ಲಿಂದ ತೆಗೀಲಿ ಹೇಳು. ಮಸಲ, ಅಲ್ಲಿ ಬೆಕ್ಕು ಬಿದ್ದು ಸತ್ತಿತ್ತು ಅಂತಾನೇ ಇಟ್ಟುಕೋ. ತೆಗೆದ ಮೇಲೆ ಬಾವೀಗೆ ಹಾಕೊ ಸುಣ್ಣಕ್ಕೆ, ಅಮೇಲೆ ಪುಣ್ಯಾವರ್ಚನೆಗೆ, ಇನ್ನು ಮೂರು ನಾಲ್ಕು ದಿನ ಹೊಳೆಯಿಂದ ನೀರು ತರಿಸೋದಕ್ಕೆ ಆ ಗುಂಡನ ಭತ್ಯ—ಹೀಗೇ ಇನ್ನೂ ಏನೇನೋ ಖರ್ಚಾಗಿ ರೋದೊ ? ಅಥವಾ ಯಾರಿಗೆ ಗೊತ್ತು, ಹೊಸ ಬಾವೀನೇ ತೋಡಿಸಬೇಕಾಗಿರೋದೊ ? ಈಗ ನಿನಗೆ ಅದೆಲ್ಲಾ ಉಳೀತೊ !

ಶಾಮರಾವ್ : ಅದೆಲ್ಲಾ ಬಿಡು, ಸುಮ್ಮನೆ ಮಾತಿನಿಂದ ಏನು ಪ್ರಯೋಜನ ? ಹೆಚ್ಚಿಗೆ ಅಂದರೆ, ಅರ್ಧ ಕೆಲಸ ಆಗಿದೆ ಅಂದುಕೊಂಡು ಇಪ್ಪತ್ತರ ಅರ್ಧ ಹತ್ತು ಕೊಟ್ಟೇನು. ಮೇಲೆ, ಬೇಕಾದರೆ ಆ ಸ್ವೆಟರ್‌ನೂ ತೊಗೊಂಡು ಹೋಗು,

ಅಳಸಿಂಗರು : (ನೋವಿನ ಧ್ವನಿಯಲ್ಲಿ) ನಾನು ಚೌಕಾಶಿ ಮಾಡ್ತಿಲ್ಲ, ಶಾಮರಾವ್. ನೀನು ಕಾಣೆ, ಆ ಇಪ್ಪತ್ತು ರೂಪಾಯಿ ಇವೊತ್ತು ನನಗೆ ಎಷ್ಟು ಮುಖ್ಯ ಅಂತ. ಅದನ್ನ

ಸಂಪಾದಿಸದೆ ಮನೆ ಮೆಟ್ಟಿಲು ಹತ್ತೋಲ್ಲ ಅಂತ ಮಕ್ಕಳ ಮೇಲೆ ಆಣೆ ಇಟ್ಟು ಬಂದಿದ್ದೆ.

ಶಾಮರಾವ್ : ನಿನಗೇನು ಕನಸು ಬಿದ್ದಿತ್ತೆ, ಬಾವೀಲಿ ಬೆಕ್ಕು ಬಿದ್ದಿದೆ ಅಂದುಕೊಂಡು ನಾವು ಇಲ್ಲಿ ಒದ್ದಾಡತಾ ಇರ್ತೀವಿ ಅಂತ.

ಆಳಸಿಂಗರು : ಒಂದು ರೀತೀಲಿ ಕನಸೇ ಅನ್ನು. ನನಗೆ ಬೆಳಗ್ಗೆಯೇ ಸುದ್ದಿ ತಿಳೀತು. ಅಂತಲೇ ಇಲ್ಲಿಗೆ ಬಂದದ್ದು.

ಶಾಮರಾವ್ : ಅಂದರೆ ?

ಆಳಸಿಂಗರು : ಬೆಳಗ್ಗೆ ಪೂಜೆ, ಪಾರಾಯಣ ಮುಗಿಸಿ ಹೊರಗೆ ಬಂದೆ. ದೊಡ್ಡ ಚಿಂತೆ—ತುರ್ತಾಗಿ ಇವೊತ್ತು ಕನಿಷ್ಠ ಇಪ್ಪತ್ತು ರೂಪಾಯಿ ಬೇಕಾಗಿದೆ. ಮನೇಲಿ ಒಂದು ಕಿಲುಬು ಕಾಸಿಲ್ಲ. ಅಡವಿಡೋಣ ಅಂದರೆ ಒಂದು ಒಳ್ಳೇ ದಬ್ಬಣಿಗೆ ಸಹ ಗತಿಯಿಲ್ಲ. 'ಏನು ಹೀಗಾಯ್ತಲ್ಲ ದೇವರೇ' ಅಂತ ಯೋಚಿಸತಾ ಜಗಲಿಯ ಮೇಲೆ ಬಂದು ನಿಂತುಕೊಂಡೆ. ಅದೇ ಹೊತ್ತಿಗೆ ಬೆಸ್ತರ ಗಂಗ ಮನೆ ಮುಂದೆ ಹೋಗ್ತಿದ್ದುದು ಕಂಡಿತು. ನಿಮ್ಮ ಮನೆಯಿಂದಲೇ ಬರ್ತಿದ್ದನಂತೆ. 'ಕೈ ಮುಗಿದೆ ಸ್ವಾಮಿ' ಅಂದ. 'ಏನೋ, ಏನು ಸಮಾಚಾರ ? ಎಲ್ಲಿ ಹೊರಟೆ' ಅಂದೆ. ನಿಮ್ಮ ಬಾವೀಲಿ ಬೆಕ್ಕು ಬಿದ್ದಿರೋ ವಿಷಯ ಹೇಳಿದ. 'ಇವತ್ತು ಮಂಗಳವಾರ. ಕಸುಬುದಾರರು ಯಾರಾದರೂ ಬಾವೀಗೆ ಇಳಿಯೋದುಂಟ ?' ಅಂದ.

ಶಾಮರಾವ್ : (ಕೋಪದಿಂದ) ಮತ್ತೆ ಸೂಳೇಮಗ 'ಅರ್ಧಗಂಟೇಲಿ ಸಾಮಾನು ತೊಗೊಂಡುಬಂದು ತೆಕ್ಕೊಡ್ತೀನಿ' ಅಂತ ಯಾಕೆ ಬೊಗಳಿದ ?

ಆಳಸಿಂಗರು : ಅದನ್ನೂ ಹೇಳಿದ—'ಬುದ್ಧಿಯೋರಿಗೆ ಮುಂಗೋಪ. ನಿಜ ಹೇಳಿದರೆ ಎರಗಿ ಬೀಳ್ತಾರೆ. "ಈಗ ಬಂದೆ" ಅಂತ ಹೇಳಿ ಬಂದಿವ್ನಿ. ನಾಳೆ ಹೋಗ್ತೀನಿ' ಅಂದ. ತಕ್ಷಣ ಏನೋ ಹೊಳೀತು, ಬದುಕಿದೆ ಅಂದುಕೊಂಡೆ. ಆ

ಶ್ರೀರಂಗನಾಥನೇ ಬೆಸ್ತರ ಗಂಗನಾಗಿ ಬಂದು ದಾರಿ ತೋರಿಸ್ತಿದಾನೆ ಅಂದುಕೊಂಡೆ. 'ಇವೊತ್ತು ಮನೇಲಿ ಪೂಜೆ, ಪ್ರಸಾದ ತೊಗೊಂಡು ಹೋಗುವಿಯುಂತೆ ಬಾರೊ' ಅಂತ ಪುಸಲಾಯಿಸಿ ಕರೆದು, ಜಗಲಿ ಮೇಲೆ ಕೂರಿಸಿ, ಕೈಯಲ್ಲಿ ನಾಲ್ಕು ಬಾಳೆಹಣ್ಣಿಟ್ಟೆ. ಅವನು ಪ್ರಸಾದ ತಿಂತಿರೋವಾಗ ಬಾವೀಗಿಳಿಯೋದು ಹೇಗೆ ಅಂತ ವಿವರ ವಾಗಿ ಕೇಳಿ ತಿಳಿದುಕೊಂಡೆ. ಹಗ್ಗಾನ ಮೇಲೆ ಅಡ್ಡ ತೊಲೇಗೆ ಬಿಗಿದು, ಕೈ ಜಾರದಂತೆ ಜೋಪಾನವಾಗಿ ಹಿಡಕೋಬೇಕು, ಮಾರುಮಾರಿಗೆ ಆಕಡೆ ಒಂದು ಗೂಡು, ಈ ಕಡೆ ಒಂದು ಗೂಡಿನ ಮೇಲೆ ಕಾಲಿಟ್ಟುಕೊಂಡು ಇಳೀಬೇಕು ಅಂತ ಗೊತ್ತಾಯಿತು. ಅವನು ಹೇಳಿದ ರೀತೀಲಿ ಎಲ್ಲಾ ಎಷ್ಟು ಸುಲಭ ಅನ್ನಿಸಿತು ಅಂತೀಯೆ. ಬದುಕಿನಲ್ಲಿ ಹಣ ಸಂಪಾದಿಸೋಕೆ ಇದೊಂದನ್ನ ಮಾಡಿರಲಿಲ್ಲ, ಇವತ್ತು ಮಾಡಬೇಕಾಗಿ ಬಂದಿದೆ. ಹೋಗಲಿ, ಅದಕ್ಕೆ ತಕ್ಕಹಾಗೆ ಮೈಕೈ ಗಟ್ಟಿಯಾಗಿದೆಯೆ ಅಂದರೆ ಎಡಗಾಲು ತಿರಚು, ಕದಿರುಗಡ್ಡಿ. ಇದುವರೆಗೆ ಹುಡುಗರು 'ಕುಂಟಯ್ಯಂಗಾರಿ' ಅಂತ ಹಾಸ್ಯ ಮಾಡಿದಾಗ ನನಗೇನೂ ಅನ್ನಿಸಿರಲಿಲ್ಲ. ಅವರ ಜತೆ ನಾನೂ ನಕ್ಕುಬಿಡೋವೆ. ಆದರೆ, ಇವೊತ್ತು ಜೀವಮಾನದಲ್ಲಿ ಮೊದಲ ಸಲ, ನನ್ನ ಕಾಲಿನ ಐಬು ನೋಡಿ ನನಗೇ ರೇಗಿತು, ಸಂಕಟವಾಯಿತು. 'ಶ್ರೀ ರಂಗನಾಥ... ಶೇಷಶಯನ...ನೀನು ಮಾಡಿಸಿದ ಹಾಗಾಗಲಪ್ಪ' ಅಂತ ಮನಸ್ಸಿನಲ್ಲೇ ಪ್ರಾರ್ಥಿಸಿ ಗಂಗನ್ನ ಕಳಿಸಿಕೊಟ್ಟೆ.

ಶಾಮರಾವ್ : (ಅವಾಕ್ಕಾಗಿ) ಪುತ್ತೆ ಹುಡುಗನಲ್ಲಿ ಮೇಲುಕೋಟೆ ಬೆಟ್ಟದ ಮೇಲೆ ದಿನಕ್ಕೆರಡುಸಲ ಬಾವಿ ಹತ್ತಿ, ಇಳಿದು ಮಾಡ್ತಿದ್ದೆ ಅಂದೆಯಲ್ಲೊ.

ಅಳಸಿಂಗರು : ಸುಳ್ಳು, ಸುಳ್ಳು! ಬೆಟ ದ ಮೇಲೆ ಎಂಥ ಬಾವಿಯೊ ?

ಅಲ್ಲಿ ಮಳೆನೀರಿನ ಹೊಂಡಗಳು, ಕೊಳಗಳು ಇರುತ್ತವೆ ಅಷ್ಟೆ. ನನಗೆ ಬಾವಿಗಿಳಿಯೋದಕ್ಕೆ ಬರೋದಿಲ್ಲ ಅಂದಿದ್ದರೆ ನೀನು ಇಳಿಯೋದಕ್ಕೆ ಬಿಡ್ತಿದ್ದೆಯಾ ? ಸರಿ, ಇಡೀ ದಿನ ಮನಸ್ಸಿನಲ್ಲಿ ಹೋರಾಟ—ಬದುಕು ಸಾವಿನ ಆಟ ಆಡೋದೆ ಬೇಡವೆ ಅಂತ. ಸಂಜೆಯಾಗತ್ತಾ ಬಂತು. ನಿರ್ಧಾರವನ್ನ ಮುಂದೆ ಹಾಕುವ ಹಾಗಿರಲಿಲ್ಲ. ಬೆಳಗಾದರೆ ಗಂಗ ಬರ್‍ತಾನೆ, ಸಿಕ್ಕಿರೋ ಅವಕಾಶವನ್ನ ಕಸಿದುಕೊಳ್ಳ ತಾನೆ. ಆದದ್ದಾಗಲಿ ಅಂತ ದೇವರ ಮೇಲೆ ಭಾರ ಹಾಕಿ ಹೊರಟು ಬಂದೆ....ನಿಜವಾಗಿಯೂ, ಶಾಮಿ, ಇವತ್ತು ಬದುಕಿ ಮನೆಗೆ ಹಿಂದಿರುಗ್ತೀನಿ ಅನ್ನೋ ನಂಬಿಕೆ ಇರಲಿಲ್ಲ. ನಾಳೆ ಗಂಗ ಬಂದು ಬೆಕ್ಕಿನ ಜತೆ ನನ್ನ ಹೆಣಾನ್ನೂ ಎತ್ತಿ ಹಾಕತಾನೆ ಅಂದುಕೊಂಡಿದ್ದೆ. ಆದರೆ ಭಲೇ, ಆ ನಮ್ಮಪ್ಪ ರಂಗನಾಥ ಕೈ ಬಿಡಲಿಲ್ಲ.

ಶಾಮರಾವ್ : ಅಲ್ಲವೊ, ಇದೇ ಮೊದಲನೆ ಸಲ ಬಾವಿಗಿಳೀತಿದ್ದದ್ದು ಅಂದೆ. ಒಂದು ಕ್ಷಣ ಯೋಚಿಸು. ಇಳಿಯೋವಾಗ ಕಾಲು ಜಾರಿ, ಮುಗಚಿಕೊಂಡು ನಿನ್ನ ಕತೆ ಮುಗಿದಿದ್ದಿದ್ದರೆ ನನ್ನ ಗತಿ ಏನಾಗಿರೋದು ? ಮನೇಗೆ ಬಂದೋನನ್ನ ಸುಲಿಗೆ ಮಾಡಿ ಬಾವೀಗೆ ನೂಕಿದ ಅಂತ ಗುಲ್ಲಾಗಿರೋದೊ ? ಕ್ರಿಮಿನಲ್ ಲಾಯರ್ ಆಗಿ, ಅಟ್ಟಹಾಸದಿಂದ ಕೋರ್ಟಿಗೆ ಹೋಗ್ತಿದ್ದವನು ಈಗ ಕಾಮನ್ ಕ್ರಿಮಿನಲ್‌ನಂತೆ ತಲೆ ತಗ್ಗಿಸಿಕೊಂಡು ಕಟಕಟೇಲಿ ನಿಂತುಕೋಬೇಕಾಗಿ ಬಂದಿರೋದೊ ? ಎಂಥ ವಿಪರ್ಯಾಸವಾಗಿರೋದು ಅಂತ ನೀನು ಊಹಿಸಬಲ್ಲೆಯಾ ? ನನ್ನ ಇಡೀ ಕೆರಿಯರ್ರೆ ಹಾಳಾಗಿರೋದಲ್ಲೊ ?

ಅಳಸಿಂಗರು : ಹಾಗೂ ಆಗೋ ಸಾಧ್ಯತೆ ಇದೆ ಅಂತ ಗೊತ್ತಿತ್ತು. ಅದಕ್ಕೇ ಬಾವಿ ಹತ್ತಿರ ನನ್ನ ಚೇಲಾನ ನಿನ್ನ ಕೈಗೆ ಕೊಟ್ಟದ್ದು. ಅದರಲ್ಲಿ ನಾನೇ ಕೈಯಾರೆ ಬಿದ್ದಾಗಿ

ಮುಚ್ಚಳಿಕೆ ಬರದಿಟ್ಟಿದ್ದೆ. ಇದು ನೋಡು–(ಚೀಲದಿಂದ ಒಂದು ಕವರ್, ಅದರಿಂದ ಒಂದು ಕಾಗದ ತೆಗೆದು ಬಿಚ್ಚಿ ಓದುವನು) 'ಜೀವನದಲ್ಲಿ ಬೇಸರ ತಡೆಯಲಾರದೆ, ಆತ್ಮಹತ್ಯೆಯು ಹೊರತು ಬೇರೆ ದಾರಿಯಿಲ್ಲವೆಂಬ ನಿರ್ಧಾರಕ್ಕೆ ಬಂದು ಹೊಳೆಯಲ್ಲಿ ಸಾಕಷ್ಟು ನೀರಿಲ್ಲದ ಕಾರಣ, ಊರಿನಲ್ಲಿ ಬೇರೆ ಯಾರ ಬಾವಿಯೂ ಸಾಕಷ್ಟು ಆಳವಿಲ್ಲದ ಕಾರಣ, ಲಾಯರ್ ಶಾಮರಾಯರ ಮನೆಗೆ ಬಂದು ಅವರ ಕಣ್ಣು ತಪ್ಪಿಸಿ, ಸ್ವಂತ ಇಚ್ಛೆಯಿಂದ ಅವರ ಮನೆಯ ಬಾವಿಗೆ ಬಿದ್ದು ಪ್ರಾಣ ಕಳೆದು ಕೊಳ್ಳುತ್ತಿದ್ದೇನೆ. ಇದಕ್ಕೆ, ನನ್ನ ಹೊರತು, ಬೇರೆ ಯಾರೂ ಯಾವ ರೀತಿಯಲ್ಲಿಯೂ ಹೊಣೆಗಾರರಲ್ಲ— ಸಹಿ ಎನ್. ಎಸ್. ಆಳಸಿಂಗರಾಚಾರ್.'

ಶಾಮರಾವ್ : It's a poor draft… ಇನ್ನೂ ಮಜಬೂತಾಗಿ ಬರೀಬಹುದಿತ್ತು.

ಆಳಸಿಂಗರು : ಅಷ್ಟೇ ಅಲ್ಲ. ನಾನು ಸತ್ತ ಮೇಲೆ ಉಳಿದಿರೋ ಚೂರು ಗೋಪಾಳ ಮಗಳೂ ಮೊಮ್ಮಗನಿಗೆ ಸಿಗೋದಕ್ಕೆ ಸರಕಾರೀ ತೊಂದರೆಗಳು ಅಡ್ಡಿ ಬರದೇ ಇರಲಿ ಅಂತ ವಿಲ್ ಮಾಡಿ ಮನೇಲಿ ದೇವರ ಗೂಡಿನಲ್ಲಿ ಇಟ್ಟು ಬಂದಿದೀನಿ. ಕಟ್ಟಿರಲಿ ಬಿಡಲಿ, ಲಾಯರ್ ಆದದ್ದಕ್ಕೆ ಅಷ್ಟೂ ಜವಾಬ್ದಾರಿ ಇಲ್ಲ ಅಂದುಕೊಂಡೆಯಾ ?

ಶಾಮರಾವ್ : Unregistered willಉ. ಅದರ Validity questionable ಎ !

ಆಳಸಿಂಗರು : (ಅವನ ಟೀಕೆಗೆ ಗಮನ ಕೊಡದೆ) ನೀನೇನೊ ಹೇಳಿ ಕೊಂಡೆ, ನಾನು ಸತ್ತಿದ್ದಿದ್ದರೆ ನೀನು ಊರಿನ ದೊಡ್ಡ ಕ್ರಿಮಿನಲ್ ಲಾಯರು ಕಾಮನ್ ಕ್ರಿಮಿನಲ್ ಆಗಬೇಕಾಗಿ ಬಂದಿರೋದು, ಎಂಥ ವಿಪರ್ಯಾಸ ಅಂತ. ನಿಜ. ಆದರೆ ನಾನು ಸಣ್ಣಮನುಷ್ಯ, ನಾನೂ ಒಂದು ಸಣ್ಣ

ವಿಪರ್ಯಾಸಾನ ಎದುರಿಸಬೇಕಾಗಿರೋದು ಅಂತ ಯೋಚಿಸಿ ದೀಯಾ ?

ಶಾಮರಾವ್ : ಅದೇನಪ್ಪ ಅಂಥಾದ್ದು ?

ಅಳಸಿಂಗರು : ಜೀವನದಲ್ಲಿ ಬೇಸರ, ಆತ್ಮಹತ್ಯೆ—ಇವು ನನ್ನ ಜಾಯಮಾನಕ್ಕೆ ಬಂದದ್ದಲ್ಲ. ಐವತ್ತು ವರ್ಷ ಹೇಗೋ ದುಃಖ, ಕಷ್ಟ ನುಂಗಿಕೊಂಡು ನಗುನಗುತ್ತ ಬಾಳಿದವನು, ಈಗ ಆ ಇಲ್ಲದ ಜಾಡ್ಯಗಳೆಲ್ಲವೂ ಇದೆ ಅಂತ ಒಪ್ಪಿಕೊಂಡು, ಮುಚ್ಚಳಿಕೆ ಬರೆದಿಟ್ಟು ಪ್ರಾಣ ಕಳೆದುಕೊಳ್ಳೋದು ಕಡಿಮೆ ವಿಪರ್ಯಾಸವೆ ? ನನಗೆ ಪ್ರಿಯವಲ್ಲದ ಒಂದು ಅಭಿಪ್ರಾಯ ನಾನು ಸತ್ತಮೇಲೆಯೂ ಸದಾಕಾಲ ನನಗೆ ಅಂಟಿಕೊಂಡು, ಈ ಊರಿನ ಸ್ಥಳ ಪುರಾಣದಲ್ಲಿ ಶಾಶ್ವತವಾಗಿ ಅಂಕಿತವಾಗಿ ಬಿಟ್ಟಿರೋದೊ ? 'ಯಾವ ಅಳಸಿಂಗರಾಚಾರ್ಯರು ?' ಅಂದೇಟಿಗೆ 'ಅದೇ, ಆ ಲಾಯರ್ ಶಾಮರಾಯರ ಮನೆ ಬಾವಿಗೆ ಬಿದ್ದು ಪ್ರಾಣ ಕಳಕೊಂಡೋರು !' ಅಂತ ಜನ ಅನ್ನುವ ಹಾಗೆ ಆಗಿರೋದೊ ? ಸ್ಥಿತಿ ಹೀಗಿದ್ದೂ, ಇಪ್ಪತ್ತು ರೂಪಾಯಿ ಮಾತಾಡಿ ಈಗ ಹತ್ತಕ್ಕೆ ಇಳಿಸ್ತಿದೀಯಲ್ಲ. ನನಗೆಂಥ ತುರ್ತಿದೆ ಅಂತ ನಿನಗೇನು ಗೊತ್ತು ?

ಶಾಮರಾವ್ : (ಕೊಂಚ ಮೃದುವಾಗುತ್ತ) ಏನಪ್ಪಾ ಅದು, ಅಂಥ ತುರ್ತು ? ಬಾವೀಗೆ ಬಿದ್ದು ಪ್ರಾಣ ಹೋದರೂ ಸರಿಯೆ, ಇಪ್ಪತ್ತು ರೂಪಾಯಿ ಸಂಪಾದಿಸಲೇಬೇಕು ಅನ್ನೋ ಅಂಥಾದ್ದು !

(ಹೊರಗಡೆ ಗೇಟಿನ ಕಡೆಯಿಂದ ಅಳಸಿಂಗರಾಚಾರ್ಯರ ಮೊಮ್ಮಗ—ಸಂಪತ್ತು ಆತುರದಲ್ಲಿ ಕೂಗುವ ಶಬ್ದ)

ಸಂಪತ್ತು : ತಾತ...ತಾತ. ಬಾಲಣ್ಣ, ನಮ್ಮ ತಾತ ನಿಮ್ಮ ಮನೇಲಿ ಇದಾರ ?

ಬಾಲು : ಇದ್ದಾರೆ, ಬಾರೊ.

ಆಳಸಿಂಗರು : (ಗೇಟಿನ ಕಡೆ ತಿರುಗಿ) ಎನ್ನಡಾ ? ಎಂತಕೆ ವಂದೆಯಾಡ ?

ಸಂಪತ್ತು : (ಏದುಸಿರು ಬಿಡುತ್ತ) ಅಮ್ಮ ಹೇಳಿ ಕಳಿಸಿದಾಳೆ— ನೋವು ಷುರುವಾಗಿದೆಯಂತೆ, ಬೇಗ ಬರಬೇಕಂತೆ. ವರದನ ಪಾಟಿ ಮಿಡ್‌ವೈಫ್‌ನ ಕರಕೊಂಡು ಬರೋದಕ್ಕೆ ಹೋಗಿದೆ. ಮನೇಲಿ ಬೇರೆ ಯಾರೂ ಇಲ್ಲ.

ಆಳಸಿಂಗರು : (ಶಾಮರಾಯನ ಕಡೆ ತಿರುಗಿ ನೋವಿನಿಂದ ಭಾರವಾದ ಧ್ವನಿಯಲ್ಲಿ) ತುರ್ತು ಅರ್ಥವಾಯಿತ್ತೆ, ಶಾಮರಾವ್ ? ಮಗಳು ಬಾಣಂತನಕ್ಕೆ ಬಂದಿದಾಳೆ. ತಾಯಿಯಿಲ್ಲದ ಹುಡುಗಿ, ಅವಳಿಗೆ ತವರು ದಿಕ್ಕಿಲ್ಲ ಅಂತ ಅನ್ನಿಸ ಬಾರದು ಅಂತ ನಾನೇ ಬಲವಂತ ಮಾಡಿ ಕರೆಸಿಕೊಂಡಿ ದೀನಿ. ಅವಳಿಗೆ ತಿಂಗಳು ತುಂಬಿದೆ. ಮನೇಲಿ ಒಂದು ಹೊಸ ಜೀವ ಬರೋದಿದೆ. ಅದನ್ನ ಬರಮಾಡಿ ಕೊಳ್ಳೋಕೆ ಕೈಯಲ್ಲಿ ಒಂದು ಬಿಡಿಗಾಸಿಲ್ಲ. ಭಿಕ್ಷೆ ಬೇಡೋದು ಒಂದು ಬಿಟ್ಟು, ಕದಿಯೋದು ಒಂದು ಹೊರತು, ಇವತ್ತು ಹೇಗಾದರೂ ಇಪ್ಪತ್ತು ರೂಪಾಯಿ ಹುಟ್ಟಿಸಲೇಬೇಕಾಗಿತ್ತು...ಸಂಪತ್ತು, ನೀನು ಓಡು. ಹೋಗಿ ಅಮ್ಮನ ಹತ್ತಿರಾನೇ ಇರು. ನಾನು ಈಗ ಬಂದೆ. (ಸಂಪತ್ತು ಓಡುತ್ತ ಹೋಗುವನು)

ಶಾಮರಾವ್ : ಬಾಲು, ಒಳಗೆ ಮೇಜನ ಖಾನೇಲಿ ಪರ್ಸಿದೆ. ತೊಗೊಂಡು ಬಾ. (ಆಳಸಿಂಗರುವಿನ ಕಡೆಗೆ ತಿರುಗಿ) ನಂಬೋಕ್ಕಾಗದ್ದನ್ನ ಮಾಡಿ ತೋರಿಸಿಬಿಟ್ಟೆಯಲ್ಲ, ಆಳಸಿಂಗ್ರು. ನೀನು ಪ್ರಚಂಡ, ಕಣಯ್ಯಾ, ಇವತ್ತು ನಿನ್ನ ಕೈ ಕುಲುಕಬೇಕು ಅನ್ನಿಸುತ್ತೆ. ತಾ ಇಲ್ಲಿ. (ಶಾಮರಾವ್ ಆಳಸಿಂಗರಾಚಾರ್ಯನ ಕೈ ಹಿಡಿದು, ಬಿಡಲು ಇಷ್ಟವಿಲ್ಲದವನಂತೆ ಕುಲುಕುವನು. ಇಬ್ಬರೂ ಒಬ್ಬರನ್ನೊಬ್ಬರು ಆತ್ಮೀಯರಾಗಿ ನೋಡುತ್ತ ನಿಲ್ಲುವರು)

ಆಳಸಿಂಗರು : ನಾನಲ್ಲ ಕಣೊ. ಪ್ರಚಂಡ—ಪ್ರಚಂಡ ಅಂದರೆ ಈ ಬದುಕು ! ಅದು ನಮ್ಮನ್ನೂ ಪ್ರಚಂಡರನ್ನಾಗಿ ಮಾಡಿ ಬಿಡುತ್ತೆ !

(ಬಾಲು ಪರ್ಸ್ ತಂದು ಕೊಡುವನು. ಅದರಿಂದ ಶಾಮರಾವ್ ನೋಟು ತೆಗೆದು ಆಳಸಿಂಗರಾಚಾರ್ಯನ ಕೈಯಲ್ಲಿಡುವನು.)

ವೆಂಕಮ್ಮ : ವಿಷಯ ಹೀಗಿದೆ ಅಂತ ನಮಗೆ ಒಂದು ಮಾತು ಹೇಳೋದು ಬಿಟ್ಟು ಇಷ್ಟೆಲ್ಲಾ ಫಜೀತಿ ಪಡ ಬೇಕಾಗಿತ್ತೇನಪ್ಪ, ಆಳಶಿಂಗ್ರು ? ನಾವೇನು ದೂರದವರೆ ?

ಆಳಸಿಂಗರು : (ಶಾಮರಾವ್ ಕೊಟ್ಟ ನೋಟುಗಳನ್ನು ಬಿಡಿಸುತ್ತ, ಜೋಕ್ ಮಾಡುವವನಂತೆ) ದೂರದವನಾಗಿದ್ದಿದ್ದರೆ ನಿಮ್ಮ ಬಾವೀಗೆ ಬಂದು ಇಳೀತಿದ್ದೆನೆ !

(ವೆಂಕಮ್ಮ ತರಾತುರಿಯಲ್ಲಿ ಒಳಹೋಗುವಳು.)

ಆಳಸಿಂಗರು : ಇದೇನು, ಶಾಮಿ ? ಇಪ್ಪತ್ತು ಅಂತ ಹತ್ತರದ್ದು ಮೂರು ನೋಟು ಕೊಟ್ಟಿದೀಯಲ್ಲ.

ಶಾಮರಾವ್ : (ಮೃದುವಾಗಿ ನಗುತ್ತ ಕೊಂಚ ಜಂಬದಿಂದ) ಏನು, ಮೂರಿದೆಯೆ ? ತಪ್ಪೆಣಿಸಿ ಕೊಟ್ಟೆ ಅಂತ ಕಾಣುತ್ತೆ... ಇರಲಿ. ಇಟ್ಟುಕೊ. ಆ ಮೂರನೇದು ಹುಟ್ಟೋ ನಿನ್ನ ಮೊಮ್ಮಗನಿಗೆ ನನ್ನ ಪ್ರೆಸೆಂಟು ಅಂದುಕೊ.

ಆಳಸಿಂಗರು : (ಎರಡು ನೋಟುಗಳನ್ನು ಬನಿಯನ್ನಿನ ಬಗಲು ಜೇಬಿಗೆ ಹಾಕಿ, ಮೂರನೆಯದನ್ನು ಕೈಯಲ್ಲಿ ಹಿಡಿದು, ಒಂದು ಕ್ಷಣ ಅದನ್ನೇ ದಿಟ್ಟಿಸಿ ನೋಡಿ ಯೋಚಿಸುತ್ತ) ಶಾಮಿ, ಹುಟ್ಟೋ ನನ್ನ ಮೊಮ್ಮಗನಿಗೆ 'ಪ್ರೆಸೆಂಟು' ಅಂದರೆ ಏನು ಅಂತ ಅರ್ಥವಾಗೋಕ್ಕೆ ಇನ್ನೂ ಎಂಟು ವರ್ಷ ಬೇಕಾಗುತ್ತೆ. ಅಲ್ಲೀವರೆಗೆ ಈ ಭಾರಾನ್ನ ನನ್ನ ಮೇಲೆ ಯಾಕೆ ಹೊರಿಸ್ತಿ ? ಸದ್ಯಕ್ಕೆ ಇದು ನಿನ್ನ ಹತ್ತಿರವೇ

ಇರಲಿ. ಮುಂದೆ ಅವನಿಗೆ ನೀನೇ ಕೊಡುವೆಯಂತೆ.

(ಆಳಸಿಂಗರು ಆ ನೋಟನ್ನು ಹಿಂದಿರುಗಿಸುವನು. ಶಾಮರಾವ್ ಕೊಂಚ ಪೆಚ್ಚಾದರೂ ತೋರಗೊಡದೆ ಅದನ್ನು ಹಿಂದೆಗೆದುಕೊಳ್ಳುವನು. ಅಷ್ಟರಲ್ಲಿ ಅತ್ತ ವೆಂಕಮ್ಮ ತರಾತುರಿಯಲ್ಲಿ ಒಳಗಿನಿಂದ ಶಾಲು ಹೊದ್ದು ಬಂದು ಗೇಟಿನ ಕಡೆಗೆ ನಡೆಯುವಳು.)

**ಶಾಮರಾವ್** : ಏನಮ್ಮಾ, ಪುರಾಣಕ್ಕೆ ಹೀಗೆ ಹೊರಟೆ ? ಹೂವಿನ ತಟ್ಟೆ ಬುಟ್ಟಿ ಎಲ್ಲಾ ಎಲ್ಲಿ ?

**ವೆಂಕಮ್ಮ** : ಪುರಾಣವೇನು, ದಿನಾ ಇದ್ದೇ ಇರುತ್ತೆ...ಪಾಪ, ಅವರ ಮನೇಲಿ ಸಂದರ್ಭ ಇರೋವಾಗ, ಹೋಗಿ ನೋಡಿ ಬರ್‍ತೀನಿ. (ವೆಂಕಮ್ಮ ಹೊರಹೋಗುವಳು)

**ಆಳಸಿಂಗರು** : ನೋಡಿದೆಯಾ, ಶಾಮಿ. ನನ್ನ ಮೊಮ್ಮಗ ಎಷ್ಟು ಪುಣ್ಯವಂತ. ಊರ ದೊಡ್ಡ ಲಾಯರ ತಾಯಿಯ ಕೈಯಲ್ಲಿ ಎತ್ತಿಸಿಕೊಂಡು, ಈ ಪ್ರಪಂಚಕ್ಕೆ ಬರೋನಿದಾನೆ ...ಇನ್ನು ನಾನು ಬರ್‍ತೀನಿ.

(ಕುಂಟು ಕಾಲೆಳೆದುಕೊಂಡು ಹೋಗುತ್ತಾನೆ. ಶಾಮರಾವ್ ಗೇಟಿನವರೆಗೆ ಅವನ ಜತೆಜತೆಗೇ ನಡೆದು ಬರುತ್ತಾನೆ.)

**ಶಾಮರಾವ್** : ಹೋಗಿದ್ದು ಬಾ... ದೇವರು ಒಳ್ಳೇದು ಮಾಡಲಿ. ಆಮೇಲೆ ಸಂಪತ್ತು ಕೈಯಲ್ಲಿ ಕೊಬ್ಬರಿಸಕ್ಕರೆ ಕಳಿಸೋದು ಮರೀಬೇಡ.

(ಶಾಮರಾವ್ ಗೇಟಿಗೆ ಕೈ ಆನಿಸಿಕೊಂಡು ನಡೆದು ಹೋಗುವ ವ್ಯಕ್ತಿಯ ಕಡೆಗೇ ನೋಡುತ್ತ ನಿಲ್ಲುತ್ತಾನೆ, ತೆರೆ ಬೀಳುತ್ತದೆ.)



ಈ ನಾಟಕದಲ್ಲಿನ ಮುಖ್ಯ ಪಾತ್ರವಾದ ಅಳಸಿಂಗರು ಒಂದೆಡೆ ಹೇಳುತ್ತಾನೆ– "ಬದುಕೋದಕ್ಕೆ ಅಂತಲೇ ಹುಟ್ಟಿರೋ ಬೆಕ್ಕು ಅಷ್ಟು ಸುಲಭವಾಗಿ ಸಾಯೋದುಂಟೆ ? ಇನ್ನೇನು ಬಾವಿಗೆ ಮಗುಚಿಕೊಂಡಿತು, ಮುಗೀತು ಅದರ ಅವಸ್ಥೆ ಅನ್ನೋವಾಗ ಅದರ ಮೈಯಲ್ಲಿ ಮಿಂಚು ಮೂಡಿಬರುತ್ತೆ. ಹೇಗೋ ತನಗೇ ತಿಳೀದೆ ಚಂಗನೆ ಹಾರಿ ತಪ್ಪಿಸಿ ಕೊಳ್ಳುತ್ತೆ. ಅದು ಹೆಜ್ಜೆ ಹೆಜ್ಜೆಗೆ ಸಾವನ್ನ ಸತಾಯಿಸುತ್ತೆ, ಸಾವಿರ ಸಲ ಸತಾಯಿಸುತ್ತೆ, ಅದು ಅರ್ಥವಾಗೋದು ನನ್ನಂತಹವನಿಗೆ —ಬದುಕಿನ ಬಾವಿಯ ಮೇಲೆ ಕೂತು, ಬೆಕ್ಕಿನ ಹಾಗೆ ಬಿದ್ದೂ ಬೀಳದಂತೆ ನಾಜೂಕಾಗಿ ಬಾಳು ನಡೆಸಬೇಕಾಗಿ ಬಂದಿರೋನಿಗೆ".

ಎಲ್ಲಿಯೂ ನಡೆಯಬಹುದಾದಂತಹ ನಿಜ ಜೀವನದ ಸ್ವಾರಸ್ಯಕರವಾದ ಘಟನೆಯೊಂದನ್ನು ಮೂಲದಲ್ಲಿಟ್ಟುಕೊಂಡು ಹುಟ್ಟಿರುವ ಈ ನಾಟಕ ವಿಶ್ವಾಸೋತ್ಸಾಹಗಳಿಂದ ಶ್ರೀಮಂತವಾದ ಮಾನವೀಯ ಬದುಕಿಗೆ ಸಲ್ಲಿಸಿದ ಗೌರವ - ಪ್ರಶಂಸೆ. ಸಾಂಪ್ರದಾಯಕವಾದ ವಾಸ್ತವಿಕ ರಂಗಶೈಲಿಯಲ್ಲಿದ್ದರೂ ಅದರ ಎಂದಿನ ದೌರ್ಬಲ್ಯಗಳಾದ ಹಾಸ್ಯ, ವಿನೋದ, ವಿಡಂಬನೆ, ಕಣ್ಣೀರುಗಳಿಂದ ದೂರವುಳಿದು, ಅದನ್ನು ಹೆಚ್ಚಿನ ಗಂಭೀರ ಪ್ರಯೋಜನಕೆ ದುಡಿಸಿಕೊಂಡು, ಆ ರಂಗ ಶೈಲಿಗೆ ಹೊಸ ಜೀವ ಕೊಡಲು ಪ್ರಯತ್ನಿಸಿದೆ.

---

ಅಕ್ಷರ ಪ್ರಕಾಶನ,

ಸಾಗರ - 577 401 (ಕರ್ನಾಟಕ)

ಬೆಲೆ [illegible]